# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು: ಎಚ್ಚೆಸ್ಕೆ

ಈ ಸಂಚಿಕೆಯಲ್ಲಿ



ಏಪ್ರಿಲ್
೧೯೮೪



**ಸಮನ್ವಯ ಸಮಿತಿ (ರಿ.)**
**(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)**
**ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ**
**ಬೆಂಗಳೂರು 560002**

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಬ್ಯಾಂಕಿಂಗ ಪ್ರಪಂಚ

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

ಸಂಪುಟ ೫ ಏಪ್ರಿಲ್ ೧೯೮೪ ಸಂಚಿಕೆ ೧

ಸಂಪಾದಕ: ಎಚ್ಚೆಸ್ಕೆ



**ಸಮನ್ವಯ ಸಮಿತಿ (ರಿ.)**

(ಭಾರತೀಯ ಸ್ಟೇಟ್ ಬ್ಯಾಂಕ್
ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

ವಾರ್ಷಿಕ ಚಂದಾ ರೂ. ೭
ಆಜೀವ ಚಂದಾ ರೂ. ೧೦೦
ಬಿಡಿ ಪ್ರತಿ ರೂ. ೪

# ನಮೂನೆ IV

(ನಿಯಮ 8ನ್ನು ನೋಡಿ)

| | |
|---|---|
| 1 ಪ್ರಕಟಣೆಯ ಸ್ಥಳ | ಬೆಂಗಳೂರು 560002 |
| 2 ನಿಯತಕಾಲಿಕದ ಅವಧಿ | ಅರ್ಧವಾರ್ಷಿಕ |
| 3 ಮುದ್ರಕರ ಹೆಸರು | **ಶ್ರೀ ಜಿ. ಎಚ್. ಕೃಷ್ಣಮೂರ್ತಿ** |
| ರಾಷ್ಟ್ರಿಕತೆ | ಭಾರತೀಯ |
| ವಿಳಾಸ | ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್<br>ಗಡಿಯಾರ ಗೋಪುರ ಚೌಕ<br>ಮೈಸೂರು 570 001 |
| 4 ಪ್ರಕಾಶಕರ ಹೆಸರು | **ಶ್ರೀ ಚೋ. ನಂಜಪ್ಪ** |
| ರಾಷ್ಟ್ರಿಕತೆ | ಭಾರತೀಯ |
| ವಿಳಾಸ | ಪ್ರಧಾನ ಕಾರ್ಯದರ್ಶಿ<br>ಸಮನ್ವಯ ಸಮಿತಿ<br>ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು<br>ಭಾರತೀಯ ಸ್ಟೇಟ್ ಬ್ಯಾಂಕ್<br>22 ಜಯಚಾಮರಾಜೇಂದ್ರ ರಸ್ತೆ<br>ಬೆಂಗಳೂರು 560 002 |
| 5 ಸಂಪಾದಕರ ಹೆಸರು | **ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್)** |
| ರಾಷ್ಟ್ರಿಕತೆ | ಭಾರತೀಯ |
| ವಿಳಾಸ | 41, ಆರನೆಯ ಮುಖ್ಯ ರಸ್ತೆ<br>ಸರಸ್ವತೀಪುರ, ಮೈಸೂರು 570 009 |
| 6 ಒಟ್ಟು ಬಂಡವಾಳದ ಶೇ. 1ಕ್ಕಿಂತ ಹೆಚ್ಚಿನ ಷೇರುಗಳನ್ನು ಹೊಂದಿರುವ ಷೇರುದಾರರ ಅಥವಾ ಪಾಲುದಾರರ, ಪತ್ರಿಕೆಯ ಮಾಲೀಕರ ಹೆಸರು ವಿಳಾಸಗಳು | **ಸಮನ್ವಯ ಸಮಿತಿ (ರಿ)**<br>**ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು**<br>ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ<br>22 ಜಯಚಾಮರಾಜ ರಸ್ತೆ,<br>ಬೆಂಗಳೂರು 560 002 |

ನಾನು, ಚೋ. ನಂಜಪ್ಪ, ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಂತೆ ನಿಜವಾದವೆಂದು ಈ ಮೂಲಕ ಘೋಷಿಸುತ್ತೇನೆ.

**ಚೋ. ನಂಜಪ್ಪ**
ಪ್ರಕಾಶಕ

# 'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು

(ಹಿಂದಿನ ಸಂಚಿಕೆಯಿಂದ)

ಶ್ರೀಯುತರಾದ

105 ಸ್ಥಳೀಯ ಅನುಷ್ಠಾನ ಸಮಿತಿ,
ಭಾರತೀಯ ಸ್ಟೇಟ್ ಬ್ಯಾಂಕು,
ಸ್ಥಳೀಯ ಪ್ರಧಾನ ಕಛೇರಿ,
ಬೆಂಗಳೂರು 560 001

106 ಮಂಗಳೂರು ಕ್ಯಾಥೊಲಿಕ್
ಕೋ-ಆಪರೇಟಿವ್ ಬ್ಯಾಂಕ್ ಲಿ.
ಮಂಗಳೂರು 575 001

107 ಎಸ್. ಜಿ. ಕೋಡ್‌ಕರ್, ಜೂನಿಯರ್
ಕಾಲೇಜು, ಕಟಕೋಳ 591 114

108 ವಿ. ವೆಂಕಟಸುಬ್ಬು

109 ಗಂಗಾಧರ್

110 ವೆ. ಅಣ್ಣಯ್ಯ

111 ಎಸ್. ಜಯಕುಮಾರ್

112 ಭಾರತೀಯ ಸ್ಟೇಟ್ ಬ್ಯಾಂಕ್,
ಬೆಂಗಳೂರು ಮುಖ್ಯ ಶಾಖೆ

113 ಭಾರತೀಯ ಸ್ಟೇಟ್ ಬ್ಯಾಂಕ್,
ಬೆಂಗಳೂರು ನಗರ ಶಾಖೆ

114 ಪಿ. ವಿ. ಚಂದ್ರಶೇಖರ್

115 ಭಾರತೀಯ ಸ್ಟೇಟ್ ಬ್ಯಾಂಕ್,
ಸಾಗರೋತ್ತರ ಶಾಖೆ, ಬೆಂಗಳೂರು

116 ಎಸ್. ವಿಜಯಕುಮಾರ್ (ಹುಬ್ಬಳ್ಳಿ)

117 ಭಾರತೀಯ ಸ್ಟೇಟ್ ಬ್ಯಾಂಕ್,
ಮಹಾತ್ಮ ಗಾಂಧಿ ರಸ್ತೆ ಶಾಖೆ,
ಬೆಂಗಳೂರು

118 ಜೆ.ಎಸ್.ಎಸ್. ಜೂನಿಯರ್ ಕಾಲೇಜ್,
ಬೆಂಗಳೂರು 560 041

119 ರಾ. ಮ. ಕುಲಕರ್ಣಿ

120 ಜನಾರ್ದನ ತುಂಗ

121 ಕೈ. ನಂ. ಗುಹ

122 ವಿ. ಪ್ರಕಾಶ್

123 ವಿಜಯಾ ಬ್ಯಾಂಕ್ ಕನ್ನಡ ಸಂಘ,
ವಿಜಯಾ ಬ್ಯಾಂಕ್, ಪ್ರಧಾನ ಕಛೇರಿ
ಬೆಂಗಳೂರು 560 025

ಶಿರಸಿ ಅರ್ಬನ್ ಕೋ-ಆಪರೇಟಿವ್ ಬ್ಯಾಂಕು ಶಿರಸಿಯಲ್ಲಿ ನಡೆದ ಮೂರನೆಯ ಕಮ್ಮಟಕ್ಕಾಗಿ ರೂ. 500 ಕೊಡುಗೆಯನ್ನು ನೀಡಿದೆ. ಸಮಿತಿ ಆ ಬ್ಯಾಂಕಿನ ಆಡಳಿತವರ್ಗಕ್ಕೆ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ನಮ್ಮ ಓದುಗರು ಹೆಚ್ಚಿನ ಸಂಖ್ಯೆಯಲ್ಲಿ ಆಜೀವ ಚಂದಾದಾರರಾಗಿ 'ಬ್ಯಾಂಕಿಂಗ್ ಪ್ರಪಂಚ'ವನ್ನು ಬಲಪಡಿಸ ಬೇಕೆಂದು ಕೋರಿಕೆ.

ಆಜೀವ ಚಂದಾ ರೂ. 100ನ್ನು **'ಸಮನ್ವಯ ಸಮಿತಿ'ಯ** ಹೆಸರಿಗೆ ಬರೆದ ಚೆಕ್ ಅಥವಾ ಡ್ರಾಫ್ಟ್ ಮೂಲಕ ಕಳುಹಿಸಬಹುದು.

**ಸಮನ್ವಯ ಸಮಿತಿ (ನೋಂದಾಯಿತ)**
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
**ದ್ವಾರಾ: ಭಾರತೀಯ ಸ್ಟೇಟ್ ಬ್ಯಾಂಕ್**
ಬೆಂಗಳೂರು ನಗರ ಶಾಖೆ
೨೨ ಜಯಚಾಮರಾಜ ಒಡೆಯರ್ ರಸ್ತೆ
ಬೆಂಗಳೂರು ೫೬೦ ೦೦೨

## ಈ ಸಂಚಿಕೆಯ ಲೇಖನದಾರರು

**ಟಿ. ಕೆ. ರಂಗನಾಥ್ :** ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಳಗಾಂವಿ ಶಾಖೆ 590 001

**ಜಿ. ಎನ್. ನರಸಿಂಹಮೂರ್ತಿ :** ಮುಖ್ಯ ನಗದಿಗಾರ, ಭಾರತೀಯ ಸ್ಟೇಟ್ ಬ್ಯಾಂಕ್, ಹೊಸಪೇಟೆ

**ಬಿ. ಎಸ್. ಚಂದ್ರಶೇಖರ :** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ

**ಡಿ. ವಿ. ರಮಣಮೂರ್ತಿ :** ಬ್ಯಾಂಕಿಂಗ್ ತಜ್ಞರು

**ಬೆಂ. ಶ್ರೀ. ರವೀಂದ್ರ :** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಪ್ರಾದೇಶಿಕ ಕಛೇರಿ, ಬೆಂಗಳೂರು-1

**ಹು. ವಾ. ಶ್ರೀಪ್ರಕಾಶ :** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ

**ಕೆ. ಎನ್. ಮಹಾಬಲ :** ಭಾರತೀಯ ಸ್ಟೇಟ್ ಬ್ಯಾಂಕ್, ಸೇಂಟ್ ಮಾರ್ಕ್ಸ್ ರಸ್ತೆ ಶಾಖೆ, ಬೆಂಗಳೂರು

**ಬಿ. ವಿ. ಚಂದ್ರಮೌಳಿ :** ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ

**ಮೇ. ಕೃ. ಅನಂತಸ್ವಾಮಿ :** ಶಾಖಾ ವ್ಯವಸ್ಥಾಪಕ, ಭಾರತೀಯ ಸ್ಟೇಟ್ ಬ್ಯಾಂಕ್, ಸೇಂಟ್ ಮಾರ್ಕ್ಸ್ ರಸ್ತೆ, ಬೆಂಗಳೂರು ; ಅಧ್ಯಕ್ಷ, ಸಮನ್ವಯ ಸಮಿತಿ, ಭಾರತೀಯ ಸ್ಟೇಟ್ ಬ್ಯಾಂಕ್, ಕನ್ನಡ ಸಂಘಗಳ ಸಮನ್ವಯ ಸಮಿತಿ

**ಅ. ಚ. ಅಶೋಕ ಕುಮಾರ :** ಶಾಖಾ ವ್ಯವಸ್ಥಾಪಕ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಶಿವನ ಸಮುದ್ರ

**ಸಾ. ರಾಜಗೋಪಾಲ :** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್ ಪ್ರಾದೇಶಿಕ ಕಛೇರಿ, ಬೆಂಗಳೂರು-1 ; ಪ್ರಧಾನ ಕಾರ್ಯದರ್ಶಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ

**ಸ್ವಾನ್ ನೋಕ್ರಾಫ್ಟ್ :** ಅರ್ಥಶಾಸ್ತ್ರ ಇಲಾಖೆಯ ಮುಖ್ಯರು, ಮಿಡ್ಲೆಂಡ್ ಬ್ಯಾಂಕ್, ಲಂಡನ್

**ಡಿ. ಕುಮಾರ್ :** ಕಾರ್ಯದರ್ಶಿ, ಕನ್ನಡ ಸಂಘ, ಕೆನರಾ ಬ್ಯಾಂಕ್, ಅವಿನ್ಯೂ ರಸ್ತೆ ಶಾಖೆ, ಬೆಂಗಳೂರು

**ಸಿ. ಎಂ. ಶಾಂತವೀರಯ್ಯ :** ಭಾರತೀಯ ಸ್ಟೇಟ್ ಬ್ಯಾಂಕ್, ಹೊಸಪೇಟೆ 583 201

**ಸಿಂಧುವಳ್ಳಿ ಬಾಲಸುಬ್ರಹ್ಮಣ್ಯ :** ಅಧ್ಯಾಪಕ, ಡಿ. ಬನುಮಯ್ಯ ಕಾಲೇಜು, ಮೈಸೂರು

**ಬಿ. ನಾಗಯ್ಯ ಶೆಟ್ಟಿ :** ಅಧಿಕಾರಿ, ವಿಜಯಾ ಬ್ಯಾಂಕ್, ಹೊಸಪೇಟೆ

**ಮೈಕೇಲ್ ಪಿಚರ್ :** ಅಸಿಸ್ಟೆಂಟ್ ಜನರಲ್ ಮ್ಯಾನೇಜರ್, ಬಾರ್ಕ್ಲೇಸ್ ಬ್ಯಾಂಕ್, ಲಂಡನ್

**ಜನಾರ್ದನ ತುಂಗ :** ಬ್ಯಾಂಕ್ ಆಫ್ ಬರೋಡ, ಬೆಂಗಳೂರು

**ಬೆ. ಕಾ. ಮೂರ್ತೀಶ್ವರಯ್ಯ :** ವಕೀಲರು, ದ್ವಾರಾ : ಸಿ. ವಿ. ಸುಬ್ಬರಾವ್, 389, ಓ.ಟಿ.ಸಿ. ರಸ್ತೆ, ಬೆಂಗಳೂರು 560 053

**ಶಾಂತರಾಜು :** ಉಪಕಾರ್ಯದರ್ಶಿ, ಅಖಿಲ ಭಾರತೀಯ ಸ್ಟೇಟ್ ಬ್ಯಾಂಕ್ ಅಧಿಕಾರಿಗಳ ಒಕ್ಕೂಟ ; ಸಂಘಟನಾ ಕಾರ್ಯದರ್ಶಿ, ಅಖಿಲ ಭಾರತ ಬ್ಯಾಂಕ್ ಅಧಿಕಾರಿಗಳ ಸಂಘಗಳ ಒಕ್ಕೂಟದ ರಾಜ್ಯಘಟಕ

**ಸಾ. ಅ. ಮಂಜುನಾಥ :** 45-5/1, 'ಶಂಕರ ಕೃಪ' ಹಿಂಭಾಗ, 16ನೆಯ ಅಡ್ಡ ರಸ್ತೆ, 3ನೆಯ ವಿಭಾಗ, ಜಯನಗರ, ಬೆಂಗಳೂರು 560 002

# ಸಂಪಾದಕೀಯ

'ಬ್ಯಾಂಕಿಂಗ್ ಪ್ರಪಂಚ'ದ ಕಳೆದ ಸಂಚಿಕೆ ಪ್ರಕಟವಾದಂದಿನಿಂದ ಇದುವರೆಗಿನ ಅವಧಿಯಲ್ಲಿ ಭಾರತೀಯ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಅನೇಕ ಮಹತ್ತ್ವದ ಬೆಳವಣಿಗೆಗಳಾಗಿವೆ. ಗಣಕಗಳ (ಕಂಪ್ಯೂಟರ್) ಬಳಕೆಯ ಬಗ್ಗೆ ಬ್ಯಾಂಕುಗಳ ವ್ಯವಸ್ಥಾಪಕ ವರ್ಗಕ್ಕೂ ಉದ್ಯೋಗಿಗಳಿಗೂ ನಡುವೆ ಆಗಿರುವ ಒಪ್ಪಂದ, ಬ್ಯಾಂಕಿಂಗ್ ಕಾನೂನುಗಳ (ತಿದ್ದುಪಡಿ) ಅಧಿನಿಯಮ—ಇವು ಮುಖ್ಯವಾದ ಎರಡು ಬೆಳವಣಿಗೆಗಳು. ಬ್ಯಾಂಕುಗಳ ಮೇಲೆ ದೀರ್ಘಕಾಲದಲ್ಲಿ ಆಗುವ ಪರಿಣಾಮಗಳ ದೃಷ್ಟಿಯಿಂದ ಇವುಗಳ ಪರಿಶೀಲನೆ ಅಗತ್ಯ.

## ಗಣಕಯಂತ್ರದ ಬಳಕೆ

ಹಲವರ ಕೆಲಸವನ್ನು ಶೀಘ್ರವಾಗಿಯೂ ಸಮರ್ಥವಾಗಿಯೂ ಮಾಡಬಲ್ಲ ಯಾವುದೇ ಯಂತ್ರವ್ಯವಸ್ಥೆಯನ್ನು ಅಳವಡಿಸುವಾಗಲೂ ಅದರಿಂದ ಕಾರ್ಮಿಕರಿಗೆ ನಿರುದ್ಯೋಗ ಪ್ರಾಪ್ತದಾಗುವುದೆಂಬ ಅಂಜಿಕೆ ಬರುವುದು ಸಹಜ. ಲಾಭದೃಷ್ಟಿಯೇ ಮುಖ್ಯವಾದ ಅರ್ಥವ್ಯವಸ್ಥೆ ಇರುವ ಸಮಾಜಗಳಲ್ಲಿ ಈ ಅಂಜಿಕೆ ನಿಜವಾಗುವುದೂ ಉಂಟು. ಭಾರತದಲ್ಲಿ ಬಹುತೇಕ ಬ್ಯಾಂಕುಗಳು ರಾಷ್ಟ್ರೀಕೃತವಾಗಿ ಸರ್ಕಾರದ ಸ್ವಾಮ್ಯ ಹಾಗೂ ನಿಯಂತ್ರಣಗಳಿಗೆ ಒಳಪಟ್ಟಿರುವುವಾದರೂ ಅವು ಲಾಭದೃಷ್ಟಿಯ ಚೌಕಟ್ಟಿನೊಳಗೇ ಕೆಲಸ ಮಾಡುವುದು ಸದ್ಯಕ್ಕಂತೂ ಅನಿವಾರ್ಯ. ದಕ್ಷತೆ, ಉಪಯುಕ್ತತೆ, ಜೀವನಸಾಮರ್ಥ್ಯಗಳನ್ನು ಅಳತೆಮಾಡುವ ಪರ್ಯಾಯ ವಿಧಾನವೊಂದು ಲಭ್ಯವಾಗುವ ವರೆಗೂ ಇದು ಮುಂದುವರಿಯುವುದೆಂದು ನಿರೀಕ್ಷಿಸಬಹುದು. ಈ ಮೌಲ್ಯ ಪದ್ಧತಿಯ ಅಡಿಯಲ್ಲಿ ಕೆಲಸ ಮಾಡುವ ಬ್ಯಾಂಕುಗಳ ವ್ಯವಸ್ಥಾಪಕ ವರ್ಗವಾದರೂ ಹಳೆಯ ದೃಷ್ಟಿ-ಧೋರಣೆಗಳಿಂದಲೇ ಪ್ರೇರಿತವಾದಂಥದು. ಬಹುಕಾಲದಿಂದ ಬಂದ ಮಾನಸಿಕ ನಿಲುವುಗಳನ್ನು ಕೊಡವಿಕೊಳ್ಳುವುದು ಸುಲಭವಲ್ಲ. ಸುಪ್ತಮನಸ್ಸಿನ ಆಳದಲ್ಲಿ ಅವು ಕೆಲಸ ಮಾಡುತ್ತಲೇ ಇರುತ್ತವೆ. ಕಾರ್ಮಿಕರಾದರೂ ತಮ್ಮನ್ನು ಶೋಷಣೆ ಮಾಡಲು ವ್ಯವಸ್ಥಾಪಕ ವರ್ಗ ಸದಾ ಸಜ್ಜಾಗಿದೆಯೆಂದೇ ಭಾವಿಸುತ್ತಾರೆ. ಈ ಭಾವನೆಗೆ ಇಂಬುಗೊಡುವ ಸಂಗತಿಗಳು ಪ್ರತ್ಯಕ್ಷವಾಗಿದ್ದಾಗಲಂತೂ ಇದು ತೀವ್ರಗೊಳ್ಳುತ್ತದೆ. ಎರಡೂ ವರ್ಗಗಳ ಗುರಿ ಒಂದೇ—ಅದು ಸಮಾಜಸೇವೆ ಎಂಬ ಹೊಸ ಮೌಲ್ಯವ್ಯವಸ್ಥೆ ರೂಪುಗೊಂಡು ಬೆಳೆದು ಸ್ಥಿರವಾಗುವ ವರೆಗೂ ಪರಸ್ಪರ ಅಸೂಯೆ, ಘರ್ಷಣೆ, ಮುಖಾಮುಖಿ ಇದ್ದದ್ದೇ. ಒಂದೊಂದು ಪಕ್ಷವೂ ತಂತಮ್ಮಲ್ಲಿ ಸಂಘಟಿತಗೊಳ್ಳುವುದರ ಮೂಲಕವೇ ಇನ್ನೊಂದು ಪಕ್ಷವನ್ನು ಯಶಸ್ವಿಯಾಗಿ ಇದಿರಿಸಬಹುದೆಂಬ ನಂಬಿಕೆ ಬೆಳೆದಿದೆ.

ಈ ಪರಿಸ್ಥಿತಿಯ ಒಳಿತು-ಕೆಡುಕುಗಳನ್ನು ಪರಿಶೀಲಿಸುವುದು ಈಗ ಇಲ್ಲಿಯ ಉದ್ದೇಶವಲ್ಲ. ಬೆಳೆಯುತ್ತಿರುವ ಆವಶ್ಯಕತೆಗಳಿಗೆ ಅನುಗುಣವಾಗಿ ಭಾರತೀಯ ಬ್ಯಾಂಕುಗಳು ತಮ್ಮ ಕಲಾಪಗಳಲ್ಲಿ ಗಣಕಗಳನ್ನು ಸಜ್ಜುಗೊಳಿಸುವ ವಿಚಾರವಾಗಿ ತೀವ್ರವಾದ ವಿವಾದಗಳು ಉದ್ಭವಿಸಿದ್ದುವು. ಭಾರತದ ಪರಿಸ್ಥಿತಿಯಲ್ಲಿ ಬ್ಯಾಂಕುಗಳಲ್ಲಿ ಗಣಕಯಂತ್ರಗಳನ್ನು ವ್ಯಾಪಕವಾಗಿ ಬಳಸುವ ಅಗತ್ಯವಿದೆಯೆ ಎಂಬುದಾಗಿ ಉದ್ಯೋಗಿಗಳು ಪ್ರಶ್ನಿಸುತ್ತಿದ್ದರು. ಮುಂದೆ ಹೆಚ್ಚುಹೆಚ್ಚಾಗಿ ಉದ್ಯೋಗಿ

ಗಳನ್ನು ನೇಮಕ ಮಾಡಿಕೊಳ್ಳುವ ಸಾಧ್ಯತೆ ಕಡಿಮೆಯಾಗುವುದು ಮಾತ್ರವೇ ಅಲ್ಲ, ಇರುವವರೇ ಕೆಲಸ ಕಳೆದುಕೊಳ್ಳುವರೆಂಬ ಭಯ ಉಂಟಾಗಿತ್ತು. ಬ್ಯಾಂಕುಗಳ ವ್ಯವಹಾರಗಳನ್ನು ಗಣಕೀಕರಣ ಗೊಳಿಸಲು ತಗಲುವ ವೆಚ್ಚ ಅಗಾಧ. ಕಡಿಮೆ ಖರ್ಚಿನಲ್ಲಿ ಹೆಚ್ಚು ಜನರನ್ನು ನೇಮಕ ಮಾಡಿ ಕೊಂಡು ಹೆಚ್ಚು ಉದ್ಯೋಗವನ್ನು ಕಲ್ಪಿಸಬಹುದಲ್ಲವೆ ?—ಎಂಬುದು ಸಹಜವಾದ ಪ್ರಶ್ನೆ. ಆದರೆ ಗ್ರಾಹಕರ ಅಗತ್ಯಗಳ ಪೂರೈಕೆ, ವ್ಯವಹಾರದ ಗಾತ್ರ ಬೆಳೆದಿರುವುದರಿಂದ ಸೇವೆಯಲ್ಲಿ ಉಂಟಾಗುತ್ತಿರುವ ವಿಳಂಬದ ನಿವಾರಣೆ, ಮಾನವ ದುಡಿಮೆಯಿಂದಲೇ ನಿರ್ವಹಿಸಲಾಗದಂಥ ಬ್ಯಾಂಕಿಂಗಿನ ಉನ್ನತ ಕರ್ಮಗಳ ನಿರ್ವಹಣೆ, ಉತ್ತಮವಾದ ಸೇವೆಯ ಸಲ್ಲಿಕೆ—ಈ ದೃಷ್ಟಿ ಯಿಂದ ಗಣಕಗಳ ಬಳಕೆ ಅನಿವಾರ್ಯವೆಂಬುದು ವ್ಯವಸ್ಥಾಪನದ ದೃಷ್ಟಿ.

ದೀರ್ಘಕಾಲದ ಈ ವಿವಾದ ಈಚೆಗೆ ಒಂದು ರೀತಿಯಲ್ಲಿ ಇತ್ಯರ್ಥವಾಗಿರತಕ್ಕದ್ದು ಸ್ವಾಗ ತಾರ್ಹವಾದ ಸಂಗತಿ. ಐವತ್ತೆಂಟು ಬ್ಯಾಂಕುಗಳ ವ್ಯವಸ್ಥಾಪನವನ್ನು ಪ್ರತಿನಿಧಿಸುವ ಭಾರತೀಯ ಬ್ಯಾಂಕುಗಳ ಸಂಘಕ್ಕೂ (ಐ.ಬಿ.ಎ.) ಅಖಿಲ ಭಾರತ ಬ್ಯಾಂಕ್ ನೌಕರರ ಸಂಘಕ್ಕೂ ನಡುವೆ ಒಂದು ಒಪ್ಪಂದಕ್ಕೆ ಸಹಿಯಾಗಿದೆ. (1) ಕೆಲವು ಪ್ರಾದೇಶಿಕ ಕೇಂದ್ರಗಳಲ್ಲಿ ಚೆಕ್ಕು ತೀರುವೆ ಕಲಾಪಗಳು, (2) ಬ್ಯಾಂಕುಗಳ ನಡುವಣ ವಹಿವಾಟುಗಳು, ಅಭಿಕರಣ ಕಲಾಪಗಳು, ಸರಕಾರಿ ಖಾತೆಗಳು, ಪ್ರಯಾಣಿಕರ ಚೆಕ್ಕು ವಹಿವಾಟುಗಳು ಮತ್ತು ಉದರಿ ಕಾರ್ಡುಗಳು ಇವುಗಳ ಸಮನ್ವಯ, (3) ಸುಧಾರಿತ ವಿಧಾನಗಳ ಮೂಲಕ ಹಣದ ವರ್ಗಾವಣೆ ಹಾಗೂ ರವಾನೆ, (4) ವಿದೇಶಿ ವಿನಿಮಯ ವಹಿವಾಟುಗಳು, (5) ಬ್ಯಾಂಕ್ ವ್ಯವಸ್ಥಾಪನದಿಂದ ವಿನಿಯೋಜನೆ (ಇನ್‌ವೆಸ್ಟ್‌ಮೆಂಟ್), (6) ಉದರಿಯನ್ನು ಕುರಿತದ್ದೂ ಸೇರಿದಂತೆ ವ್ಯವಸ್ಥಾಪನಕ್ಕೆ ಅಗತ್ಯ ವಾದ ಮಾಹಿತಿ ವ್ಯವಸ್ಥೆ, ಅಂಕಿ-ಅಂಶ ಕುರಿತ ಹಾಗೂ ಆಯ-ವ್ಯಯಕ್ಕೆ ಸಂಬಂಧಿಸಿದ ಮಾಹಿತಿ, ವಾರ್ಷಿಕ ಅಂತಿಮ ಲೆಕ್ಕಗಳ ಮಾಹಿತಿ ಮುಂತಾದವು, (7) ವಣಿಕ ಬ್ಯಾಂಕಿಂಗ್ (8) ಸಂಬಳ ಪಟ್ಟಿಗಳನ್ನು ಈಗಾಗಲೇ ಗಣಕೀಕೃತಗೊಳಿಸಿದ್ದರೆ ಅಂಥ ಬ್ಯಾಂಕುಗಳಲ್ಲಿ ಈ ಬಗ್ಗೆ, ಹಾಗೂ ಮುಂದೆ ಒಪ್ಪಂದಕ್ಕೆ ಬರಬಹುದಾದ ಬ್ಯಾಂಕುಗಳಲ್ಲಿ ಈ ಪಟ್ಟಿಗಳ ತಯಾರಿಕೆಗೆ, ಗಣಕಗಳನ್ನು ಬಳಸಿಕೊಳ್ಳಲು ಒಪ್ಪಂದದಲ್ಲಿ ಅನುವು ಮಾಡಲಾಗಿದೆ. ಆದರೆ ಈ ಕಾರಣದಿಂದಾಗಿ ಯಾವ ಸಿಬ್ಬಂದಿಯನ್ನೂ ಕಡಿತಮಾಡತಕ್ಕದ್ದಲ್ಲ ಎಂದೂ ನಿರ್ಧರಿಸಲಾಗಿದೆ. ಗಣಕಗಳನ್ನು ಯಾವ ಯಾವ ಕಲಾಪದಲ್ಲಿ ಎಷ್ಟೆಷ್ಟು ಮಟ್ಟಿಗೆ ಬಳಸಬೇಕೆಂಬ ವಿಚಾರವಾಗಿಯೂ, ಗಣಕೀಕರಣದ ಫಲವಾಗಿ ನೇಮಕವಾಗುವ ಸಿಬ್ಬಂದಿಗೆ ಪಾವತಿ ಮಾಡಬೇಕಾಗಬಹುದಾದ ಭತ್ಯಗಳ ವಿಚಾರ ವಾಗಿಯೂ ಪರಸ್ಪರ ಸಂಧಾನದಿಂದ ಇತ್ಯರ್ಥಪಡಿಸಬೇಕೆಂದು ಹೇಳಲಾಗಿದೆ. ಯಾಂತ್ರೀಕರಣ ಹಾಗೂ ಗಣಕೀಕರಣವನ್ನು ಇನ್ನಷ್ಟು ವಿಸ್ತರಿಸುವ ಪ್ರಶ್ನೆಯನ್ನು ಸಂಬಂಧಪಟ್ಟ ಪಕ್ಷಗಳು ಮೂರು ವರ್ಷಗಳ ಅನಂತರ ಪರಸ್ಪರ ಚರ್ಚಿಸಿ ಆ ಬಗ್ಗೆ ಹೊಸ ಒಪ್ಪಂದ ಮಾಡಿಕೊಳ್ಳ ಬೇಕೆಂದೂ ಒಡಂಬಡಿಕೆಯಾಗಿದೆ.

ಬದಲಾಗುತ್ತಿರುವ ಪರಿಸ್ಥಿತಿಯಲ್ಲಿ ಬ್ಯಾಂಕುಗಳ ಕಲಾಪಗಳನ್ನೂ ಸೇವೆಗಳನ್ನೂ ಹೆಚ್ಚು ಶೀಘ್ರವಾಗಿ ಹಾಗೂ ದಕ್ಷವಾದ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗುವಂತೆ ಹಾಗೂ ಸಾಮಾಜಿಕ ಸ್ವಾಸ್ಥ್ಯವೂ ಏರ್ಪಡುವಂತೆ ಬ್ಯಾಂಕುಗಳ ಆಧುನೀಕರಣ ಕಾರ್ಯ ಸಾಗಬೇಕಾಗಿದೆ. ಬ್ಯಾಂಕು ಗಳು, ನೌಕರವರ್ಗ, ಗ್ರಾಹಕರು ಈ ಮೂರೂ ನಿಟ್ಟುಗಳಿಂದ ಮಾತ್ರವಲ್ಲದೆ ಇಡೀ ಸಮಾಜದ ದೃಷ್ಟಿಯಿಂದ, ಅರ್ಥವ್ಯವಸ್ಥೆಯ ದೃಷ್ಟಿಯಿಂದ ಈ ಪ್ರಶ್ನೆಯನ್ನು ಅತ್ಯಂತ ಕೂಲಂಕಷವಾಗಿ ಪರಿಶೀಲಿಸಬೇಕಲ್ಲದೆ ಸರ್ವಸಮರ್ಪಕವಾದ ವ್ಯವಸ್ಥೆಯೊಂದನ್ನು ರೂಪಿಸಿ ಜಾರಿಗೆ ತರಬೇಕಾದ್ದು ಅತ್ಯಗತ್ಯ. ಈ ಉದ್ದೇಶದಿಂದ 'ಬ್ಯಾಂಕಿಂಗ್ ಪ್ರಪಂಚ'ದ ಆಶ್ರಯದಲ್ಲಿ ಕಳೆದ ಫೆಬ್ರುವರಿ 25 ರಂದು ಬೆಂಗಳೂರಿನಲ್ಲಿ ವಿಚಾರಸಂಕಿರಣವೊಂದನ್ನು ಏರ್ಪಡಿಸಲಾಗಿತ್ತು. ಬ್ಯಾಂಕಿಂಗ್ ಕ್ಷೇತ್ರದಲ್ಲಿ

ಗಣಕಯಂತ್ರದ ಬಳಕೆಯ ಇತಿಮಿತಿ, ವಿದೇಶಿ ಬ್ಯಾಂಕುಗಳಲ್ಲಿ ಇದರ ಬಳಕೆ,ಗ್ರಾಹಕನ, ಕಾರ್ಮಿಕರ ಹಾಗೂ ಆಡಳಿತದ ದೃಷ್ಟಿಯಲ್ಲಿ ಗಣಕೀಕರಣ, ಭವಿಷ್ಯದ ಸಾಧ್ಯತೆ ಮುಂತಾದ ನಾನಾ ಮುಖ ಗಳನ್ನು ಕುರಿತ ವಿಚಾರಪೂರ್ಣ ಪ್ರಬಂಧಗಳು ಈ ಸಂಕಿರಣದಲ್ಲಿ ಮಂಡಿತವಾಗಿದ್ದುವು. ಈ ಬಗ್ಗೆ ಸ್ವಾರಸ್ಯಪೂರ್ಣವಾದ ಚರ್ಚೆಯೂ ನಡೆಯಿತು. ಇಂಥ ಒಂದು ವಿಚಾರವನ್ನು ಕುರಿತು ಈ ನಾನಾ ಕ್ಷೇತ್ರಗಳ ಧುರೀಣರು ಕನ್ನಡದಲ್ಲಿ ಪ್ರಬಂಧ ಮಂಡಿಸಿದರು, ಚರ್ಚಿಸಿದರು ಎಂಬುದೂ, 'ಬ್ಯಾಂಕಿಂಗ್ ಪ್ರಪಂಚ' ಇದಕ್ಕೆ ಸಂಚಾಲನೆ ನೀಡಿತೆಂಬುದೂ ಅಭಿಮಾನದ ಸಂಗತಿ. 'ಬ್ಯಾಂಕಿಂಗ್ ಪ್ರಪಂಚ'ದ ಮುಂದಿನ ಸಂಚಿಕೆಯಲ್ಲಿ ಈ ಪ್ರಬಂಧಗಳನ್ನು ಪ್ರಕಟಿಸುವ ಉದ್ದೇಶವಿದೆ.

### ಬ್ಯಾಂಕಿಂಗ್ ಕಾನೂನುಗಳ ತಿದ್ದುಪಡಿ

ಬಹಳ ಕಾಲದಿಂದ ಅಡಿಗಲ್ಲಿನ ಮೇಲಿದ್ದ ಬ್ಯಾಂಕಿಂಗ್ ಕಾನೂನುಗಳ ತಿದ್ದುಪಡಿ ವಿಧೇಯಕ ಕೊನೆಗೂ ಅಧಿನಿಯಮವಾಗಿ ಭಾರತದ ಸಂಸತ್ತಿನಿಂದ ಸ್ವೀಕೃತವಾದ್ದು ಇನ್ನೊಂದು ಮುಖ್ಯ ಬೆಳವಣಿಗೆ. ಬ್ಯಾಂಕರನ ಪುಸ್ತಕಗಳ ಸಾಕ್ಷ್ಯ ಅಧಿನಿಯಮ, ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ, ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ, ಭಾರತೀಯ ಸ್ಟೇಟ್ ಬ್ಯಾಂಕ್ ಹಾಗೂ ಸಹವರ್ತಿ ಬ್ಯಾಂಕ್ ಅಧಿನಿಯಮಗಳು, ಠೇವಣಿ ವಿಮೆ ಹಾಗೂ ಉದರಿ ಖಾತರಿ ನಿಗಮ ಅಧಿನಿಯಮ, ಬ್ಯಾಂಕಿಂಗ್ ಕಂಪನಿಗಳ ಹಾಗೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಅಧಿ ನಿಯಮಗಳು—ಹೀಗೆ ಹಲವಾರು ಕಾನೂನುಗಳಿಗೆ ಯುಕ್ತವೆನಿಸಿದ ಹಾಗೂ ಅಗತ್ಯವೆನಿಸಿದ ತಿದ್ದುಪಡಿಗಳನ್ನು ತರುವ ಈ ಹೊಸ ಅಧಿನಿಯಮ ನಿಜಕ್ಕೂ ತುಂಬಾ ವ್ಯಾಪಕವಾದದ್ದು. ಇದರ ಅನೇಕ ಉಪಬಂಧಗಳನ್ನು ಸಾರ್ವಜನಿಕರೂ ಸಂಬಂಧಪಟ್ಟ ವಲಯಗಳವರೂ ಸ್ವಾಗತಿ ಸಿದ್ದಾರೆ. ಅಂತೆಯೇ ಕೆಲವು ಉಪಬಂಧಗಳು ಆಸಕ್ತ ವಲಯಗಳ ಉಗ್ರವಾದ ಟೀಕೆಗಳಿಗೂ ಗುರಿಯಾಗಿವೆ. ಈ ವ್ಯಾಪಕ ತಿದ್ದುಪಡಿಗಳ ಫಲವಾಗಿ ಬ್ಯಾಂಕಿಂಗ್ ಕಲಾಪಗಳಲ್ಲಿ ಗುಣಾತ್ಮಕ ಹಾಗೂ ಪರಿಮಾಣಾತ್ಮಕ ಬದಲಾವಣೆಗಳಾಗುವ ಸಂಭವವಿದೆ. ಆದರೆ ದುರ್ದೈವದ ಸಂಗತಿ ಯೆಂದರೆ, ಇದರ ಎಲ್ಲ ಮುಖಗಳ ಚರ್ಚೆ ಸಾಕಷ್ಟು ಆಗಿಲ್ಲ. ಈ ಸಂಚಿಕೆಯಲ್ಲಿ ಶ್ರೀ ಟಿ. ಕೆ. ರಂಗನಾಥ ಅವರು ಬರೆದಿರುವ ಲೇಖನದಲ್ಲಿ ಈ ಹೊಸ ಅಧಿನಿಯಮದ ವಿವೇಚನೆ ನಡೆದಿದೆ. ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ಹೊಸ ಪೇಟೆಯಲ್ಲಿ ಏರ್ಪಡಿಸಲಾಗಿದ್ದ ಬ್ಯಾಂಕಿಂಗ್ ಕಮ್ಮಟದಲ್ಲಿ ಮಂಡಿಸಲಾದ ಪ್ರಬಂಧಗಳ ಪೈಕಿ ಇದು ಒಂದು. ಆ ಕಮ್ಮಟದ ಮುಂದೆ ಬಂದ ಇನ್ನೂ ಹಲವಾರು ಪ್ರಬಂಧಗಳು ಈ ಸಂಚಿಕೆ ಯಲ್ಲಿ ಪ್ರಕಟವಾಗಿವೆ. ಚಲಾರ್ಥ ಕೋಠಿಗಳು, ಸಹಭಾಗಿತ್ವ ಬ್ಯಾಂಕಿಂಗ್, ಸಾರ್ವಜನಿಕ ಕಂಪನಿ ಠೇವಣಿಗಳು, ಬ್ಯಾಂಕಿಂಗ್ ಪರಿಭಾಷೆ, ಬ್ಯಾಂಕರರ ತರಬೇತಿ ಮುಂತಾದ ವಿಷಯಗಳನ್ನು ಕುರಿತ ಲೇಖನಗಳು ಬ್ಯಾಂಕಿಂಗಿನ ಹಲವಾರು ಹೊಸ ಮಗ್ಗಲುಗಳನ್ನೂ ಇತ್ತೀಚಿನ ಪ್ರವೃತ್ತಿ ಗಳನ್ನೂ ಪರಿಚಯ ಮಾಡಿಕೊಡುತ್ತವೆ. ಕೆಲವು ಇಂಗ್ಲಿಷ್ ಲೇಖನಗಳ ಅನುವಾದಗಳು ಪಾಶ್ಚಾತ್ಯ ದೇಶಗಳಲ್ಲಿಯ ಬ್ಯಾಂಕು ಬೆಳವಣಿಗೆಯತ್ತ ಹಾಗೂ ಸಮಸ್ಯೆಗಳತ್ತ ನಮ್ಮನ್ನು ಕರೆದೊಯ್ಯುತ್ತವೆ. ಇವೆಲ್ಲ ನಮ್ಮ ಓದುಗರಿಗೆ ಉಪಯುಕ್ತವಾದಾವೆಂದು ನಮ್ಮ ನಂಬಿಕೆ.

### ಬ್ಯಾಂಕಿಂಗ್ ಸೇವಾ ಆಯೋಗ

ಭಾರತದ ಬ್ಯಾಂಕುಗಳಿಗೆ ಅಗತ್ಯವಾದ ಅಧಿಕಾರಿಗಳ ನೇಮಕಕ್ಕೆ ಅಖಿಲ ಭಾರತ ವ್ಯಾಪ್ತಿಯ ಆಯ್ಕೆ ವ್ಯವಸ್ಥೆಯೊಂದನ್ನು ಜಾರಿಗೆ ತರುವ ಆಲೋಚನೆ ಕೇಂದ್ರ ಸರಕಾರಕ್ಕಿದೆಯೆಂದೂ

ಇಷ್ಟರಲ್ಲೇ ಈ ಬಗ್ಗೆ ವಿಧೇಯಕವೊಂದು ನಮ್ಮ ಸಂಸತ್ತಿನ ಮುಂದೆ ಬರಲಿದೆಯೆಂದೂ ಸುದ್ದಿಯೊಂದು ಬಂದಿದೆ. ಈ ಕಾರ್ಯದ ನಿರ್ವಹಣೆಗಾಗಿ ಬ್ಯಾಂಕಿಂಗ್ ಸೇವಾ ಆಯೋಗವೊಂದರ ಸ್ಥಾಪನೆಯಾಗಲಿದೆ. ಈ ಆಯೋಗ ಆಯ್ಕೆ ಮಾಡುವ ಅಭ್ಯರ್ಥಿಗಳು ಭಾರತೀಯ ಆಡಳಿತ ಸೇವಾ ಸಿಬ್ಬಂದಿಯಂತೆಯೇ (ಐಎಎಸ್) ಸೇವೆ ಸಲ್ಲಿಸುತ್ತಾರೆ. ಭಾರತೀಯ ಬ್ಯಾಂಕುಗಳಲ್ಲಿ ಈಗ ಸುಮಾರು ಒಂದೂವರೆ ಲಕ್ಷ ಅಧಿಕಾರಿಗಳಿದ್ದಾರೆ. ವರ್ಷಕ್ಕೆ ಸುಮಾರು 1,500 ಅಧಿಕಾರಿಗಳು ಹೊಸದಾಗಿ ನೇಮಕಗೊಳ್ಳುತ್ತಿದ್ದಾರೆ. ಈ ನೇಮಕ ಆಯಾ ಬ್ಯಾಂಕುಗಳಿಂದಲೇ ಈಗ ಸಾಮಾನ್ಯವಾಗಿ ಆಗುತ್ತಿದೆ. ಬ್ಯಾಂಕಿಂಗ್ ಸೇವಾ ಆಯೋಗ ಬಂದ ಮೇಲೆ ಈ ನೇಮಕಗಳನ್ನು ಎಲ್ಲ ಬ್ಯಾಂಕುಗಳಿಗೂ ಸಮಾನವಾಗಿ ಮಾಡಲಾಗುತ್ತದೆ. ಇದರಿಂದ ಅನಾವಶ್ಯಕವಾದ ವೆಚ್ಚಗಳು ತಪ್ಪುತ್ತವೆಯೆಂದು ಹೇಳಲಾಗಿದೆ. ಈಗ ಒಂದು ಬ್ಯಾಂಕು ನೇಮಕ ಮಾಡಿಕೊಳ್ಳುವ ಅಧಿಕಾರಿಗಳು ಯಾವಾಗಬೇಕಾದರೂ ಆ ಬ್ಯಾಂಕನ್ನು ಬಿಟ್ಟು ಬೇರೊಂದು ಬ್ಯಾಂಕಿಗೆ ಹೋಗಬಹುದು. ಇದರಿಂದ ಆ ಬ್ಯಾಂಕಿಗೆ ತೊಂದರೆ ಆಗುವುದು ಸಹಜ. ಅಖಿಲ ಭಾರತ ಬ್ಯಾಂಕಿಂಗ್ ಸೇವಾ ಆಯೋಗದ ನೇಮಕದಿಂದ ಇದು ತಪ್ಪುತ್ತದೆ. ಅಧಿಕಾರಿಗಳು ಒಂದು ಬ್ಯಾಂಕನ್ನು ಬಿಟ್ಟು ಇನ್ನೊಂದು ಬ್ಯಾಂಕಿಗೆ ಹೋಗುವಂತಿಲ್ಲ. ಆದರೆ ಐಎಎಸ್ ಅಧಿಕಾರಿಗಳನ್ನು ಬೇರೆಬೇರೆ ರಾಜ್ಯಗಳಿಗೆ ನಿಗದಿಪಡಿಸಿದಂತೆ ಬ್ಯಾಂಕ್ ಅಧಿಕಾರಿಗಳನ್ನೂ ನಿಗದಿಪಡಿಸಬಹುದು. ಅನೇಕ ಬ್ಯಾಂಕುಗಳಿಗೆ ತಮ್ಮ ಗ್ರಾಮೀಣ ಶಾಖೆಗಳನ್ನು ನಿರ್ವಹಿಸಲು ಯುಕ್ತವಾದ ಸಿಬ್ಬಂದಿಯೇ ದೊರಕುತ್ತಿಲ್ಲವೆನ್ನಲಾಗಿದೆ. ಇಷ್ಟವಿಲ್ಲದವರನ್ನು ಅವುಗಳಿಗೆ ನೇಮಕಮಾಡುವುದರಿಂದ ಯಾರಿಗೂ ಪ್ರಯೋಜನವಿಲ್ಲ. ಬ್ಯಾಂಕಿಂಗ್ ಸೇವಾ ಆಯೋಗ ಈ ಅಗತ್ಯಗಳನ್ನು ಗಮನದಲ್ಲಿರಿಸಿಕೊಂಡು ಆಯ್ಕೆ ಮಾಡುತ್ತದೆಯೆಂದೂ ಹೇಳಲಾಗಿದೆ.

ಬ್ಯಾಂಕಿಂಗ್ ಸೇವಾ ಆಯೋಗ ಹೊಸ ಪ್ರಯೋಗವೇನೂ ಅಲ್ಲ. 1975ರಲ್ಲಿ ಕಾಂಗ್ರೆಸ್ ಸರಕಾರ ಇಂಥ ಆಯೋಗವೊಂದನ್ನು ನೇಮಿಸಿತ್ತು. 1977ರಲ್ಲಿ ಜನತಾ ಸರಕಾರ ಬಂದಾಗ ಆ ಆಯೋಗದ ಅಧ್ಯಕ್ಷರು ಅಧಿಕಾರ ಬಿಡಲೊಲ್ಲದೆಹೋದ್ದರಿಂದ ಹೊಸ ಸರಕಾರ ಸಂಸತ್ತಿನ ಉಭಯ ಸದನಗಳ ಜಂಟಿ ಅಧಿವೇಶನವನ್ನು ಕರೆದು ಹಳೆಯ ಅಧಿನಿಯಮವನ್ನು ರದ್ದುಗೊಳಿಸಿತು. ಈಗ ಬರಲಿರುವ ಅಧಿನಿಯಮ ಹಳೆಯದರ ಪುನರ್ಜನ್ಮ. ಇದರಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಲಾಗುತ್ತದೆಯೆಂದೂ ಹೇಳಲಾಗಿದೆ. ಬ್ಯಾಂಕಿಂಗ್ ಸೇವೆಗೆ ಅಧಿಕಾರಿಗಳನ್ನು ನೇಮಕ ಮಾಡಿಕೊಳ್ಳುವಾಗ ಗುಮಾಸ್ತರಿಂದ ನಿಶ್ಚಿತ ಪ್ರಮಾಣದಲ್ಲಿ ಬಡತಿ ನೀಡುವ ಕ್ರಮವನ್ನು ಕೊನೆಗೊಳಿಸುವುದಿಲ್ಲ. ಗುಮಾಸ್ತರ ನೇಮಕಕ್ಕೆ ಹಳೆಯ ಪದ್ಧತಿಯೇ ಮುಂದುವರಿಯುತ್ತದೆ.

ಸರಕಾರ ಜಾರಿಗೆ ತರಲಿರುವ ಈ ಹೊಸ ವ್ಯವಸ್ಥೆಯನ್ನು ಎಚ್ಚರದಿಂದ ಪರೀಕ್ಷಿಸುವುದು ಅಗತ್ಯ. ಅಖಿಲ ಭಾರತದ ಹೆಸರಿನಲ್ಲಿ ಮಾಡಲಾಗುವ ಯಾವುದೇ ನೇಮಕಾತಿಯಲ್ಲಿ ಪ್ರಾದೇಶಿಕ ಆಶೋತ್ತರಗಳನ್ನು ಬಲಿಕೊಡಲಾಗದು. ಆಯಾ ಭಾಷಾ ರಾಜ್ಯಗಳಲ್ಲಿ ಆಯಾ ಭಾಷೆಗಳವರೇ ನೇಮಕವಾಗಬೇಕೆಂಬುದನ್ನು ಮರೆತರೆ ಈಗಾಗಲೇ ಆಗುತ್ತಿರುವ ಅನ್ಯಾಯವನ್ನು ವಿಸ್ತರಿಸಿದಂತಾಗುತ್ತದೆ. ಹಾಗಾಗದಂತೆ ತಡೆಗಟ್ಟಲು ಸಂಬಂಧಪಟ್ಟವರು ಈಗಲೇ ಜಾಗ್ರತರಾಗಬೇಕು. ಊರು ಕೊಳ್ಳೆಹೋದ ಮೇಲೆ ದಿಡ್ಡಿ ಬಾಗಿಲು ಹಾಕಲು ಯತ್ನಿಸಬಾರದು.

## ಬ್ಯಾಂಕ್ ಸಾಲದ ಸಮಾರಾಧನೆ

ಈಚಿನ ತಿಂಗಳುಗಳಲ್ಲಿ ಬಹಳವಾಗಿ ರಾಜಕೀಯದ ದೂಳೆಬ್ಬಿಸಿರುವ ವಿಚಾರವೆಂದರೆ ಬ್ಯಾಂಕುಗಳ ಸಾಮೂಹಿಕ ಸಾಲ ನೀಡಿಕೆ ಕಾರ್ಯಕ್ರಮ. ದೇಶದ ಹಲವೆಡೆಗಳಲ್ಲಿ ಗ್ರಾಮೀಣ ಜನಕ್ಕೂ

ಹಿಂದುಳಿದ ವರ್ಗಗಳಿಗೂ ಒಟ್ಟೊಟ್ಟಿಗೆ ಸಾಲ ನೀಡುವ ಸಮಾರಂಭಗಳು ಏರ್ಪಡುತ್ತಿವೆ. ಬ್ಯಾಂಕುಗಳಿಗೂ ಸಾಲಪಡೆಯುವವರಿಗೂ ನಡುವೆ ರಾಜಕಾರಣಿಗಳು ಬರುತ್ತಿದ್ದಾರೆ. ಬ್ಯಾಂಕರ್-ಗ್ರಾಹಕ ಸಂಬಂಧ ನೇರವಾಗಿ ಏರ್ಪಡುವ ಬದಲು ರಾಜಕಾರಣಿಯ, ಆಡಳಿತ ವ್ಯವಸ್ಥೆಯ, ಅಭಿವೃದ್ಧಿ ಅಧಿಕಾರಿಯ ಮಧ್ಯಸ್ಥಿಕೆಯ ಮೂಲಕ ಏರ್ಪಡುತ್ತಿದೆ. ಸಾಲ ಮೇಳಗಳು ಆಳುವ ರಾಜಕೀಯ ಪಕ್ಷದ ಪ್ರಚಾರ ಸಾಧನಗಳಾಗಿವೆಯೆನ್ನಲಾಗುತ್ತಿದೆ. ಠೇವಣಿದಾರರ ಹಣದ ಸೂರೆಯಾಗುತ್ತಿದೆ, ಪೋಲಾಗುತ್ತಿದೆ ಎಂದೂ ಟೀಕಿಸಲಾಗುತ್ತಿದೆ.

ಭಾರತದಂಥ ದೇಶದಲ್ಲಿ ಸಾಮಾಜಿಕ ಆರ್ಥಿಕ ಮುನ್ನಡೆಯ ಸಾಧನವಾಗಿ ಬ್ಯಾಂಕುಗಳು ಮುಂದೆ ಬರುವುದರಲ್ಲಿ ತಪ್ಪೇನೂ ಇಲ್ಲ. ಅದು ಸಾಧುವಾದ್ದೇ, ಸ್ತುತ್ಯವಾದ್ದೇ, ಸ್ವಾಗತಾರ್ಹವಾದ್ದೇ. ಕೆಲವೇ ವರ್ಗಗಳ ಸಂಸ್ಥೆಯಾಗಿದ್ದ ಬ್ಯಾಂಕು ಜನಸಮುದಾಯದ ಸಂಸ್ಥೆಯಾಗಿ ಪರಿವರ್ತನೆಗೊಳ್ಳುತ್ತಿರುವುದಕ್ಕೆ ಯಾರೂ ಆತಂಕಗೊಳ್ಳಬೇಕಾದ್ದಿಲ್ಲ. ಈ ಉದ್ದೇಶಕ್ಕಾಗಿಯೇ ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣವಾದದ್ದು. ಬ್ಯಾಂಕುಗಳ ರಾಷ್ಟ್ರೀಕರಣ ಮಾಡದೆಯೇ ಇದನ್ನು ಸಾಧಿಸಲಾಗುತ್ತಿರಲಿಲ್ಲವೇ ಎಂಬುದು ಈಗ ಜೀವಂತ ಪ್ರಶ್ನೆಯೇನೂ ಅಲ್ಲ. ಏಕೆಂದರೆ ರಾಷ್ಟ್ರೀಕರಣವಾಗಿ ಎಷ್ಟೋ ಕಾಲ ಆಗಿಹೋಗಿದೆ. ಬ್ಯಾಂಕುಗಳು ರಾಷ್ಟ್ರೀಕರಣಗೊಂಡಾಗ್ಯೂ ಅವು ಸ್ವಾಯತ್ತ ಸಂಸ್ಥೆಗಳಾಗಿ ಮುಂದುವರಿಯುವಂತೆ ಎಚ್ಚರಿಕೆ ವಹಿಸುವುದು ಅಗತ್ಯವಲ್ಲವೇ ಎಂಬುದು ಇಂದು ತೀವ್ರವಾಗಿ ಪರಿಗಣಿಸಬೇಕಾದ ಪ್ರಶ್ನೆ. ಬ್ಯಾಂಕುಗಳು ಸರಕಾರಿ ಇಲಾಖೆಗಳಂತೆ ವರ್ತಿಸಬೇಕಾದರೆ, ಮಂತ್ರಿಯೊಬ್ಬರ ಆದೇಶದಂತೆ ದಿನನಿತ್ಯದ ವ್ಯವಹಾರಗಳನ್ನು ನಡೆಸಬೇಕಾದರೆ, ಬ್ಯಾಂಕು ವ್ಯವಸ್ಥಾಪನ ವರ್ಗಕ್ಕೆ ಕಾರ್ಯ ಸ್ವಾತಂತ್ರ್ಯ ಇಲ್ಲದೆ ಇರುವುದಾದರೆ ಅವು ಪ್ರತ್ಯೇಕ ಸಂಸ್ಥೆಗಳಾಗಿ ಏಕಾದರೂ ಮುಂದುವರಿಯಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಈ ಪ್ರಶ್ನೆಯನ್ನು ಸದ್ಯಕ್ಕೆ ಪಕ್ಕಕ್ಕೆ ಸರಿಸೋಣ. ಆದರೆ ಪ್ರಕೃತದಲ್ಲಿ ಒಂದು ಮುಖ್ಯವಾದ ವಿಚಾರವನ್ನು ಕುರಿತಂತೂ ನಾವೆಲ್ಲರೂ ತೀವ್ರವಾಗಿ ಚಿಂತಿಸುವುದು ಅತ್ಯವಶ್ಯ. ದುರ್ಬಲ ವರ್ಗಗಳಿಗೆ ನೆರವು ನೀಡುವ ಸಲುವಾಗಿ ಬ್ಯಾಂಕುಗಳು ಹಮ್ಮಿಕೊಂಡಿರುವ ಸಾಲ ನೀಡಿಕೆ ಕಾರ್ಯಕ್ರಮಗಳು ಸ್ವಲ್ಪಮಟ್ಟಿಗಾದರೂ ಫಲಪ್ರದವಾಗಿವೆಯೆ ? ದೇಶದಲ್ಲಿ ರಾರಾಜಿಸುತ್ತಿರುವ ಬಡತನ ನಿರುದ್ಯೋಗ ಸಮಸ್ಯೆಗಳ ಪರಿಹಾರದ ಹಾದಿಯಲ್ಲಿ ಯಶಸ್ಸು ಸಾಧಿಸಲಾಗುತ್ತಿದೆಯೆ ?

ಬ್ಯಾಂಕುಗಳು ಅಧಿಕೃತವಾಗಿ ಈ ಬಗ್ಗೆ ನಡಸಿರುವ ಅಧ್ಯಯನಗಳು ನಮ್ಮಲ್ಲಿ ಆಶಾವಾದವನ್ನೇ ಹುಟ್ಟಿಸುತ್ತವೆ. ಬ್ಯಾಂಕುಗಳು ಸರಕಾರದ ಅಧೀನ ಸಂಸ್ಥೆಗಳಾದ್ದರಿಂದ ಸರಕಾರದ ನೀತಿಗಳನ್ನು ಎತ್ತಿ ಹಿಡಿಯಬೇಕಾದ್ದು ಅನಿವಾರ್ಯವೇನೋ. ಈ ಕಾರ್ಯಕ್ರಮಗಳು ವಿಫಲಗೊಂಡಿವೆಯೆಂದು ಹೇಳುವುದಾದರೆ ಆಗ ಸಂಬಂಧಪಟ್ಟ ಬ್ಯಾಂಕ್ ಅಧಿಕಾರಿಗಳ ನಿಷ್ಠೆ ದಕ್ಷತೆಗಳೇ ಸಂದೇಹಕ್ಕೆ ಒಳಗಾಗಬಹುದು. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕಾಲದಿಂದಲೂ ನಮ್ಮಲ್ಲಿ ಬೆಳೆದುಬಂದಿರುವ ಒಂದು ಅಭ್ಯಾಸವೆಂದರೆ, ಮೇಲಿನವರ ಮರ್ಜಿಗೆ ಅನುಗುಣವಾಗಿ ಕೆಳಗಿನವರು ನಡೆದುಕೊಳ್ಳುವುದು. 'ರಾಮಾಯ ಸ್ವಸ್ತಿ, ರಾವಣಾಯ ಸ್ವಸ್ತಿ' ಎನ್ನುವ ನೀತಿ ಅನುಸರಿಸದಿದ್ದರೆ ಕೆಳಗಿನವರು ಬದುಕಿ ಮುನ್ನಡೆಯಲಾರರು ಎಂಬ ಮನೋಭಾವ ಬಲವಾಗಿ ಬೇರೂರಿದೆ. ಪ್ರಜಾಪ್ರಭುತ್ವದಲ್ಲೂ ಇದು ಬೆಳೆಯುತ್ತಲೇ ಇದೆ. ಸ್ವತಂತ್ರವಾಗಿ ಆಲೋಚಿಸುವುದು, ಸತ್ಯವೆಂದು ಕಂಡದ್ದನ್ನು ನಿರ್ಭಯವಾಗಿ ನುಡಿಯುವುದು—ಇವು ಸೇವಾ ನಿಯಮಗಳ ಉಲ್ಲಂಘನೆಯೆಂದು ಪರಿಭಾವಿಸುವುದೇ ಮೇಲಿನವರ ವಾಡಿಕೆ. ಯಾರಾದರೂ ತಮಗೆ ಮೇಲ್ಪಟ್ಟವರು ಹೇಳುವುದನ್ನೇ ಹೇಳಬೇಕಾಗುತ್ತದೆ, ಅಂತೆಯೇ ನಡೆಯಬೇಕಾಗುತ್ತದೆ. ಅಂತೂ ಬ್ಯಾಂಕು

ಗಳು ನಡೆಸಿರುವ ಅಧ್ಯಯನಗಳು ಅವು ನೀಡಿದ ಸಾಲಗಳಲ್ಲಿ ಯಶಸ್ಸುಗಳಿಸಿದವನ್ನೇ ಎತ್ತಿ ತೋರಿಸುತ್ತವೆಯಾಗಲಿ, ವಿಫಲಗೊಂಡಂಥವನ್ನು ಎತ್ತಿಕೊಂಡು ಅವು ಏಕೆ ಹಾಗಾದು ವೆಂಬುದರ ವಿವೇಚನೆ ನಡೆದಿಲ್ಲ.

ಬ್ಯಾಂಕ್ ಅಧ್ಯಯನಗಳ ಇನ್ನೊಂದು ಮಗ್ಗುಲಿನತ್ತ ನೋಡಿದಾಗ ಚಂದ್ರನ ಶಾಶ್ವತವಾದ ಕತ್ತಲ ಮುಖದ ಹಾಗೆ ನಮಗೆ ಸತ್ಯದ ಆ ಮಹಾಪಾರ್ಶ್ವದ ದರ್ಶನವಾಗುತ್ತದೆ. ಕಳೆದ ಮೂರು ವರ್ಷಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ನಾನಾ ಕಾರ್ಯಕ್ರಮಗಳ ಅಡಿಯಲ್ಲಿ ಸುಮಾರು ಒಂದು ಕೋಟಿ ಜನಕ್ಕೆ ಸುಮಾರು ರೂ. 3,000 ಕೋಟಿಯಷ್ಟು ಹಣ ನೀಡಲಾಗಿದೆ. ಇದು ಬಹುತೇಕ ಅನುತ್ಪಾದಕವಾಗಿ ಪರಿಣಮಿಸಿದೆ. ನೀಡಿರುವ ಮುಂಗಡಗಳಲ್ಲಿ ಶೇಕಡ ಇಪ್ಪತ್ತರಷ್ಟು ಮಾತ್ರ ವಸೂಲಾಗುತ್ತಿದೆ. ಉಳಿದದ್ದು ವಸೂಲಾಗುವಂತೆಯೇ ಇಲ್ಲ. ಸಾಲ ಪಡೆದವರು ಮರುಪಾವತಿ ಮಾಡುವ ಸ್ಥಿತಿಗೆ ಸುಧಾರಣೆ ಹೊಂದಿದ್ದಾರೆಂದು ಧೈರ್ಯವಾಗಿ ಯಾರೂ ಹೇಳುವ ಹಾಗೆಯೂ ಇಲ್ಲ.

ಹೀಗೆಂದರೆ ಬ್ಯಾಂಕುಗಳು ಈ ಮಹಾಪ್ರಯತ್ನವನ್ನು ನಿಲ್ಲಿಸಿಬಿಡಬೇಕು ಎಂದೇನೂ ತೀರ್ಮಾನಿಸಬೇಕಾಗಿಲ್ಲ. ಆದರೆ ಮೇಲಿನವರು ಹೇಳಿದ್ದನ್ನು ಅಕ್ಷರಶಃ ಪಾಲಿಸುತ್ತಿದ್ದೇವೆಂದು ತೋರ್ಪಡಿಸಲು ಮಾತ್ರ, ಅಂಕಿ ಅಂಶಗಳನ್ನು ತುಂಬುವ ಸಲುವಾಗಿಯೋ, ಕೆಟ್ಟ ಹೆಸರು ಬಂದೀತೆಂಬ ಅಂಜಿಕೆಯಿಂದಾಗಿಯೋ ಇಂಥ ಕಾರ್ಯಕ್ರಮಗಳಲ್ಲಿ ಅವಿಚಾರದಿಂದ ದುಮುಕುವ ಬದಲು, ಇಂಥ ಸಂದರ್ಭಗಳಲ್ಲಿ ಬ್ಯಾಂಕರುಗಳು ಸಾಮಾನ್ಯವಾಗಿ ನಡೆಸಬೇಕಾದ ಪರಿಶೀಲನೆಗಳನ್ನು ಲಕ್ಷ್ಯಪೂರ್ವಕವಾಗಿ ನಡೆಸಬೇಕು. ನೀಡಿದ ಸಾಲದ ಫಲಪ್ರದತೆಯತ್ತ ಗಮನ ಹರಿಸಬೇಕು. ಅನಂತರ ಕೈಗೊಳ್ಳಬೇಕಾದ ಕ್ರಮಗಳನ್ನೂ ತೆಗೆದುಕೊಳ್ಳಬೇಕು. ಯಾವುದೇ ಸಾಲದ ಬಗ್ಗೆ ಬ್ಯಾಂಕು ಸ್ವತಂತ್ರವಾಗಿ, ನಿಷ್ಪಕ್ಷಪಾತವಾಗಿ, ಪೂರ್ವಾಗ್ರಹದೂರವಾಗಿ, ನಿರ್ಭಯವಾಗಿ ತೀರ್ಮಾನ ತೆಗೆದುಕೊಳ್ಳಲು ಅಗತ್ಯವಾದ ವಾತಾವರಣದ ಸೃಷ್ಟಿಯಾಗಬೇಕು. ತಕಾವಿ ಸಾಲ ನೀಡುವ ರೆವಿನ್ಯೂ ಅಧಿಕಾರಿಗೂ ಬ್ಯಾಂಕ್ ಅಧಿಕಾರಿಗೂ ಯಾವ ವ್ಯತ್ಯಾಸವೂ ಇಲ್ಲವೆಂಬಂತೆ ಬಗೆಯಬಾರದು. ಒಬ್ಬಾತ ಒಂದು ಬ್ಯಾಂಕಿನ ಅಧಿಕಾರಿಯಾದ ಮಾತ್ರಕ್ಕೆ ಅವನು ಒಮ್ಮೆಲೇ ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೆ ಬೇಕಾದ ಎಲ್ಲ ಜ್ಞಾನವನ್ನೂ ಅನುಭವವನ್ನೂ ಸಾಮರ್ಥ್ಯವನ್ನೂ ಪಡೆದುಕೊಂಡಿರುತ್ತಾನೆಂದು ಭಾವಿಸಬಾರದು. ಬ್ಯಾಂಕ್ ಕೆಲಸವೂ ಒಂದು ವೃತ್ತಿ. ಈ ವೃತ್ತಿಧರ್ಮಕ್ಕೆ ಸಮಾಜಸೇವೆಯನ್ನೂ ಜೋಡಿಸಬೇಕಾದರೆ ಸಮಾಜಸೇವೆಯನ್ನೊಂದು ವೃತ್ತಿ ಎಂಬಂತೆ ವೈಜ್ಞಾನಿಕವಾಗಿ, ಶಾಸ್ತ್ರೀಯವಾಗಿ ಅವರ ಜ್ಞಾನವನ್ನು ದೊರಕಿಸಿಕೊಡಬೇಕಾಗುತ್ತದೆ. ನಮ್ಮ ಬ್ಯಾಂಕಿಂಗ್ ಸೇವಾ ತರಬೇತಿ ಸಂಸ್ಥೆಗಳಲ್ಲಿ ಈ ವಿಚಾರಕ್ಕೆ ಎಷ್ಟರಮಟ್ಟಿನ ಗಮನಹರಿಸಲಾಗಿದೆ ? ಬ್ಯಾಂಕ್ ನೌಕರರಿಗೆ ಅಗತ್ಯವಾದ ಹಿನ್ನೆಲೆ ದೊರಕಿಸಿಕೊಡಲು ಯಾವ ಕ್ರಮವನ್ನು ಹಮ್ಮಿಕೊಳ್ಳಲಾಗಿದೆ ? ಅದಕ್ಕೆ ಅಗತ್ಯವಾದ ಅಧೋರಚನೆಯು ನಿರ್ಮಾಣವಾಗಿದೆಯೆ ? ವ್ಯವಸ್ಥೆ ಇದೆಯೆ ? ಅವ ಕೆಲಸದ ಗುಣಾತ್ಮಕ ಹಾಗೂ ಪರಿಮಾಣಾತ್ಮಕವಾದ ಅಳತೆಗೆ ಏನು ಸಾಧನವಿದೆ ?

'ಎತ್ತು ಈದಿತು' ಎಂದರೆ 'ಕೊಟ್ಟಿಗೆಗೆ ಕಟ್ಟು' ಎಂಬ ಅವಿಚಾರಿ ಸೇವಾ ಮನೋಧರ್ಮದಿಂದ ಎಂಥ ಸದುದ್ದೇಶಗಳೂ ದುರಂತದಲ್ಲೇ ಪರ್ಯವಸಾನವಾಗಬಹುದು ಎಂಬುದಕ್ಕೆ ಈ ಕಾರ್ಯಕ್ರಮಕ್ಕಿಂತ ಬೇರೆ ನಿದರ್ಶನ ಬೇಕಿಲ್ಲ. ದುರ್ಬಲವರ್ಗಗಳಿಗೆ ನೆರವು ನೀಡುವ ಕಾರ್ಯಕ್ರಮಗಳಲ್ಲಿ ನಿರತರಾದಂಥವರು ಸಾಮಾನ್ಯವಾಗಿ ಎರಡು ಮಹಾಪ್ರಮಾದಗಳನ್ನು ಮಾಡುತ್ತಾರೆ. ಸಮಾಜವಿಜ್ಞಾನವನ್ನಾಗಲಿ ಮನೋವಿಜ್ಞಾನವನ್ನಾಗಲಿ ಅರಿಯದ ಜನ ಇವರು. ವ್ಯವಹಾರಜ್ಞಾನವೂ ಇವರಲ್ಲಿ ಬಹುತೇಕ ಶೂನ್ಯ. ಸಮಾಜದಲ್ಲಿರುವ ದೋಷಗಳಿಗೆಲ್ಲ ಹಣದ

ಅಭಾವವೇ ಮೂಲ ಎಂಬುದು ಇವರ ಒಂದು ಭ್ರಾಂತಿ. ಹಣ ಇದ್ದರೆ ಪರಿಹಾರ ಖಂಡಿತ ಎಂಬ ಭ್ರಮಾಲೋಕದಲ್ಲಿ ಇವರು ಅಡ್ಡಾಡುತ್ತಾರೆ. ಬಡವನೊಬ್ಬನಿಗೆ ಐದು ಸಾವಿರ ರೂಪಾಯಿ ಕೊಟ್ಟುಬಿಟ್ಟರೆ ಅವನು ಅದರಿಂದ ಸ್ವಾವಲಂಬನೆ ಪಡೆದುಕೊಂಡುಬಿಡುತ್ತಾನೆ ಎಂದು ಭಾವಿಸಿ ಕೊಳ್ಳುತ್ತಾರೆ. ಬಹುಕಾಲದಿಂದ ಉಪವಾಸ ಮಾಡುತ್ತಿರುವವನಿಗೆ ಒಮ್ಮೆಲೇ ಊಟ ಬಡಿಸಿದರೆ ಅದನ್ನು ಅವನು ತಿಂದು ಬದುಕಲಾರ. ಹಣವನ್ನೇ ಕಾಣದವನು ಅದನ್ನು ಪಡೆದಾಗ ಆ ಹಣ ವನ್ನು ಹೇಗೆ ಹಾಳತವಾಗಿ ಬಳಸಿಕೊಳ್ಳಬೇಕೆಂಬ ಜ್ಞಾನವೂ ಅವನಿಗೆ ಇರುವುದಿಲ್ಲ. ಜನ ಸಾಮಾನ್ಯರ ಅಜ್ಞಾನದ ದುರುಪಯೋಗ ಪಡೆದುಕೊಳ್ಳುವ ಶೋಷಕರು ಬಹುಸಂಖ್ಯೆಯಲ್ಲಿ ರುವ ನಮ್ಮ ದೇಶದಲ್ಲಿ ಸಾಮಾನ್ಯ ಜನಕ್ಕೆ ನೆರವು ಪೂರ್ಣವಾಗಿ ತಲಪುವುದೇ ಅಪರೂಪ. ಭಗೀರಥ ತಂದ ಗಂಗೆಯು ಹಾಗೆ ಅದಕ್ಕೆ ಹಾದಿಯಲ್ಲಿ ನೂರೆಂಟು ಅಡೆತಡೆ. ಅದನ್ನು ನುಂಗಿ ನೊಣೆಯುವ ವಂಚಕರ ಸಾಲುಸಾಲು! ಇವರ ನಿವಾರಣೆಗೆ ಯಾವ ಕ್ರಮವೂ ಇಲ್ಲ. ನಮ್ಮಲ್ಲಿ ರುವ ವ್ಯವಸ್ಥೆಯೇ ಮಾರಿಯಂತೆ ಎಲ್ಲವನ್ನೂ ನುಂಗಿಹಾಕಿಬಿಡುತ್ತದೆ. ಈ ವ್ಯವಸ್ಥೆಯನ್ನು ಕಟ್ಟಿ ಕೊಂಡು ದುರ್ಬಲ ವರ್ಗಗಳ ಮುನ್ನಡೆಯ ಕಾರ್ಯದಲ್ಲಿ ತೊಡಗಿದ್ದೇವೆ ನಾವು! ಮಣ್ಣು ದೋಣಿಯಲ್ಲಿ ಕುಳಿತು ಹೊಳೆ ದಾಟಲು ಯತ್ನಿಸಿದಂತೆಯೇ ಇದು ಕ್ಲೇಶದಾಯಕ, ಅನಾಹುತ ಕಾರಿ.

ನಮ್ಮ ಸಾಲ ಧುರೀಣರ ಇನ್ನೊಂದು ಭ್ರಮೆಯೆಂದರೆ, ನಮ್ಮ ಸಮಾಜದಲ್ಲಿರುವ ಪ್ರತಿ ಯೊಬ್ಬ ನಿರುದ್ಯೋಗಿಯೂ ಸ್ವತಂತ್ರವಾಗಿ ಯಾವುದಾದರೊಂದು ಉದ್ಯಮವನ್ನು ಸ್ಥಾಪಿಸಿ ನಡಸಬಲ್ಲನೆಂಬುದು. ಹಣವಿಲ್ಲದ್ದರಿಂದಲೇ ಅವನು ನಿರುದ್ಯೋಗಿಯಾಗಿದ್ದಾನೆ ಎಂಬ ಭಾವನೆ ಯುಂಟು. ಯಾವುದೇ ಉದ್ಯಮ ಸ್ಥಾಪಿಸಿ ನಡೆಸಬೇಕಾದರೆ ಅದು ಎಷ್ಟೇ ಸಣ್ಣದಾಗಿರಲಿ, ಅದಕ್ಕೆ ಅನುಭವ ಬೇಕು, ದಕ್ಷತೆ ಇರಬೇಕು. ಪರಂಪರೆಯಾಗಿ ಬಂದ ಉದ್ಯೋಗಗಳನ್ನೆಲ್ಲಾ ನಾಶಪಡಿಸಿರುವ ನಾವು ಹೊಸ ಉದ್ಯೋಗಗಳನ್ನು ಸ್ಥಾಪಿಸಿ ನಡಸಲು ಅಗತ್ಯವಾದ ಸಂರಚನೆ ಯನ್ನು ನಿರ್ಮಿಸಬೇಕು. ದುರ್ಬಲವರ್ಗಗಳಿಗೆ ನೀಡುವ ನೆರವು ಅರ್ಥಪೂರ್ಣವೂ ಸಫಲವೂ ಆಗ ಬೇಕಾದರೆ, ಪ್ರತಿಯೊಂದು ಪ್ರದೇಶಕ್ಕೂ ಹೊಂದಿಕೊಳ್ಳುವ ಕಾರ್ಯಯೋಜನೆಗಳನ್ನು ವೈಜ್ಞಾ ನಿಕವಾಗಿ ಚಿಂತಿಸಿ ರೂಪಿಸಬೇಕು. ಅಲ್ಲಿಯ ಜನರಲ್ಲಿರುವ ಕೌಶಲ ಹಾಗೂ ಅನುಭವಗಳಿಗೆ ಅವು ಅನುಗುಣವಾಗಿರಬೇಕು. ಅಲ್ಲಿ ಹೊಸ ಉದ್ಯಮಗಳನ್ನು ನಡಸಲು ಅಗತ್ಯವಾದ ಅಧೋರಚ ನೆಯ ನಿರ್ಮಾಣವಾಗಬೇಕು. ಅವಕ್ಕೆ ಬೇಕಾದ ಯಂತ್ರ, ಕಚ್ಚಾ ಸಾಮಗ್ರಿ ಮುಂತಾದವು ಒದಗಬೇಕು. ಜೊತೆಗೆ ಮಾರಾಟಗಾರಿಕೆಯ ಸೌಲಭ್ಯಗಳನ್ನೊದಗಿಸಬೇಕು. ಉತ್ಪಾದಿಸಿದ್ದು ಮಾರಾಟವಾಗುವ ಹಾಗೆ, ಅದರಿಂದ ವರಮಾನದ ಉತ್ಪಾದನೆಯಾಗುವ ಹಾಗೆ, ಲಾಭ ಕೂಡಿ ಬರುವ ಹಾಗೆ ವ್ಯವಸ್ಥೆಯಿರಬೇಕು. ಹೀಗೆ ವಿಸ್ತೃತವಾದ ಜಾಲದ ನಿರ್ಮಾಣವಾಗದೆ ನೀಡುವ ನೆರವು ಯಶಸ್ವಿಯಾಗದು. ಅಲ್ಲದೆ, ಕೇವಲ ನಾಲ್ಕೈದು ಸಾವಿರ ರೂಪಾಯಿಗಳಿಂದ ಒಂದು ಉದ್ಯಮ ಸ್ಥಾಪಿಸಬಹುದೆಂಬುದು, ಒಬ್ಬವ್ಯಕ್ತಿ ಸ್ವಾವಲಂಬಿಯಾಗಬಹುದೆಂಬುದು ಅವಾಸ್ತವಿಕ. ಸ್ವ-ಉದ್ಯೋಗವೆಂಬುದು ತಾತ್ಕಾಲಿಕವಾದ ಗುರಿ. ಅಂತಿಮವಾಗಿ ಇಡೀ ಗ್ರಾಮಪ್ರದೇಶವೇ ಪುನರ್ಜನ್ಮ ತಳೆಯಬೇಕು. ಅಲ್ಲಲ್ಲಿಗೆ ಅನುಗುಣವಾದ ತಂತ್ರಜ್ಞಾನದ ವಿಕಾಸದೊಂದಿಗೆ ಚೈತನ್ಯ ಪೂರ್ಣವಾದ ಉತ್ಪಾದನ ವ್ಯವಸ್ಥೆಯ ರೂಪಣಕ್ಕೆ ಶ್ರಮಿಸಬೇಕು. ಇಷ್ಟು ದಿನಗಳಲ್ಲಿ ಇಷ್ಟು ಹಣವನ್ನು ಸಾಲವಾಗಿ ಕೊಡಬೇಕು ಎಂದು ಗುರಿಯ ಮೇಲೆ ಕಣ್ಣಿಟ್ಟು, ಗಾಡಿಗೆ ಕಟ್ಟಿದ ಕುದುರೆಯಂತೆ ಕಣ್ಣಿಗೆ ಪಟ್ಟಿಕಟ್ಟಿಕೊಂಡು, ಅರ್ಥವಿಲ್ಲದ ಓಟ ನಡಸುವುದರಿಂದ ಅರ್ಥಸಾಧನೆ ಯಾಗದು, ಅನರ್ಥವೇ ಸಂಭವಿಸಬಹುದು. ಸಂಬಂಧಪಟ್ಟ ಎಲ್ಲರೂ ಇದನ್ನು ಕುರಿತು ಗಂಭೀರ ವಾಗಿ ಆಲೋಚಿಸಬೇಕು.

# ಬ್ಯಾಂಕಿಂಗ್ ಕಾನೂನುಗಳ [ತಿದ್ದುಪಡಿ] ಅಧಿನಿಯಮ

**ಟಿ. ಕೆ. ರಂಗನಾಥ**

ಕಳೆದ ಡಿಸೆಂಬರ್ 30ರಂದು ಲೋಕಸಭೆಯಲ್ಲಿ ಮತ್ತು 22ರಂದು ರಾಜ್ಯಸಭೆಯಲ್ಲಿ ಬ್ಯಾಂಕಿಂಗ್ ಕಾನೂನು (ತಿದ್ದುಪಡಿ) ವಿಧೇಯಕ ಎರಡು ತಿದ್ದುಪಡಿಗಳೊಡನೆ ಅಂಗೀಕರಿಸಲ್ಪಟ್ಟಿತು. 1983ರ ಜುಲೈ ತಿಂಗಳಲ್ಲಿ ಲೋಕಸಭೆಯಲ್ಲಿ ಮಂಡಿತವಾದ ಈ ವಿಧೇಯಕದ ಅಂಗೀಕಾರ ಇಷ್ಟು ಬೇಗ ಆಗುವುದೆಂದು ಬಹಳಷ್ಟು ಜನ ತಿಳಿದಿರಲಿಲ್ಲ. ಈ ಮಸೂದೆಯ ಭಾಗ 'ಸಿ'ಯನ್ನು ವಿರೋಧಿಸಿ ಭಾರತೀಯ ವರ್ತಕರ ಮಂಡಳ ಮತ್ತು ಮಹಾರಾಷ್ಟ್ರ ಸಂಘಗಳ ಮಹಾಮಂಡಳಗಳು ಮಹಾರಾಷ್ಟ್ರ, ಗುಜರಾತ್ ಹಾಗೂ ಗೋವೆಯ ಎಲ್ಲ ಕೈಗಾರಿಕಾ ಸಂಸ್ಥೆಗಳ ಬಂದನ್ನು ಅಕ್ಟೋಬರ್ 21ರಂದು ಆಚರಿಸಿದ್ದುವು. ಭಾರತೀಯ ಸಣ್ಣ ಕೈಗಾರಿಕೆಗಳ ಸಂಘಗಳ ಮಹಾಮಂಡಳ ಈ ಮಸೂದೆಯನ್ನು ಸಂಸತ್ತಿನ ಆಯ್ಕೆ ಸಮಿತಿಯ ಪರಿಶೀಲನೆಗೆ ಒಪ್ಪಿಸುವಂತೆ ಒತ್ತಾಯಪಡಿಸಿತ್ತು. ಈ ಮಸೂದೆ ಭಾರತದ ಸಂವಿಧಾನದ 19ನೆಯ ಅನುಚ್ಛೇದ ನೀಡಿರುವ ಸ್ವಾತಂತ್ರ್ಯವನ್ನು ಅಪಹರಿಸುವುದೆಂದೂ ಪ್ರಚಾರಮಾಡಲಾಗಿತ್ತು. ಇವೆಲ್ಲವುಗಳ ನಡುವೆಯೂ ಈ ಮಸೂದೆ, ಕೇವಲ ಎರಡು ಸಣ್ಣ ತಿದ್ದುಪಡಿಗಳೊಡನೆ, ಉಭಯ ಸದನಗಳಲ್ಲಿ ಅಂಗೀಕರಿಸಲ್ಪಟ್ಟದ್ದು ನಿಜಕ್ಕೂ ಆಶ್ಚರ್ಯದ ಸಂಗತಿ. ಈ ಮಸೂದೆಯ ಅಂಗೀಕಾರದ ಅನಂತರವೂ ಹಲವಾರು ವಾಣಿಜ್ಯ ಸಂಘಗಳು ಹಾಗೂ ಸಮಿತಿಗಳು ಈ ಮಸೂದೆಯನ್ನು ಪುನರ್‌ಪರಿಶೀಲಿಸುವಂತೆ ಸರಕಾರವನ್ನು ಕೋರಿವೆ. ಹಾಗಾಗಿ ಈ ಮಸೂದೆಯನ್ನು ಜಾರಿಗೊಳಿಸುವ ದಿನಾಂಕದ ಬಗ್ಗೆ ಇನ್ನೂ ಏನೂ ತಿಳಿದಿಲ್ಲ.

75 ಕಲಮುಗಳನ್ನುಳ್ಳ ಈ ಮಸೂದೆ ಬ್ಯಾಂಕಿಂಗ್ ಕ್ಷೇತ್ರಕ್ಕೆ ಸಂಬಂಧಿಸಿದ ಈ ಮುಂದಿನ 9 ಕಾನೂನುಗಳನ್ನು ತಿದ್ದುಪಡಿ ಮಾಡುತ್ತದೆ :

1 ಬ್ಯಾಂಕರನ ಪುಸ್ತಕಗಳ ಸಾಕ್ಷ್ಯ ಅಧಿನಿಯಮ 1891
2 ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ 1934
3 ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ 1949
4 ಭಾರತೀಯ ಸ್ಟೇಟ್ ಬ್ಯಾಂಕ್ ಅಧಿನಿಯಮ 1955
5 ಭಾರತೀಯ ಸ್ಟೇಟ್ ಬ್ಯಾಂಕ್(ಸಹವರ್ತಿ ಬ್ಯಾಂಕ್)ಗಳ ಅಧಿನಿಯಮ 1959
6 ಠೇವಣಿ ವಿಮೆ ಹಾಗೂ ಉದರಿ ಖಾತರಿ ನಿಗಮ ಅಧಿನಿಯಮ 1961
7 ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಅಧಿಗ್ರಹಣ ಮತ್ತು ವರ್ಗಾವಣೆ) ಅಧಿನಿಯಮ 1970
8 ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳ ಅಧಿನಿಯಮ 1976
9 ಬ್ಯಾಂಕಿಂಗ್ ಕಂಪನಿಗಳ (ಉದ್ಯಮಗಳ ಅಧಿಗ್ರಹಣ ಮತ್ತು ವರ್ಗಾವಣೆ) ಕಾನೂನು 1980

ಈಗ ಈ ಕಾನೂನುಗಳಿಗೆ ಮಾಡಲಾಗಿರುವ ತಿದ್ದುಪಡಿಯ ಸ್ವರೂಪವನ್ನು, ಅದರಿಂದುಂಟಾಗುವ ಪರಿಣಾಮಗಳನ್ನು ತಿಳಿಯೋಣ.

ಬ್ಯಾಂಕರನ ಪುಸ್ತಕಗಳ ಸಾಕ್ಷ್ಯಅಧಿನಿಯಮ 1891ಕ್ಕೆ ಮಾಡಲಾಗುವ ತಿದ್ದುಪಡಿಗಳು ಬ್ಯಾಂಕರನ ದೃಷ್ಟಿಯಿಂದ ಮಹತ್ವಪೂರ್ಣವಾದವು. ಬ್ಯಾಂಕ್‌ಗಳು ಕಕ್ಷಿದಾರರಲ್ಲದ ಮೊಕದ್ದಮೆಗಳಲ್ಲಿ ಬ್ಯಾಂಕರನ ಪುಸ್ತಕಗಳಲ್ಲಿ ದಾಖಲಾಗಿರುವ ವಹಿವಾಟುಗಳು ಮೊಕದ್ದಮೆಗಳಲ್ಲಿ ಸಾಕ್ಷ್ಯಾಧಾರವೆಂದು ಪರಿಗಣಿಸಬೇಕಾದ ಸಂದರ್ಭಗಳಲ್ಲಿ, ಅಸಲೀ ದಾಖಲೆಗಳನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕಾದ ಸಂದರ್ಭಗಳಲ್ಲಿ ಬ್ಯಾಂಕ್‌ಗಳಿಗೆ ಉಂಟಾಗುವ ಅನನುಕೂಲವನ್ನು ತಪ್ಪಿಸಲು ಜಾರಿಗೆ ತಂದ ಕಾಯಿದೆಯಾಗಿದೆ.

ಈ ಕಾಯ್ದೆಯ ನಾಲ್ಕನೆಯ ವಿಧಿಯಂತೆ ಬ್ಯಾಂಕುಗಳು ತಮ್ಮಲ್ಲಿರುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಸಲ್ಲಿಸಿದರೆ ನ್ಯಾಯಾಲಯಗಳು ಆ ಪ್ರತಿಗಳನ್ನು ಅಸಲು ದಾಖಲೆಗಳಂತೆ ಮಾನ್ಯಮಾಡುತ್ತವೆ. ಇತ್ತೀಚಿನ ತಿದ್ದುಪಡಿಯ ಅನ್ವಯ "ಕಾನೂನುಬದ್ಧ ವಿಚಾರಣೆಗಳು" ಎಂಬುದರ ವ್ಯಾಪ್ತಿ ಮತ್ತಷ್ಟು ವಿಶಾಲಗೊಳ್ಳುತ್ತದೆ. ಆರಕ್ಷಕರು ನಡೆಸುವ ಯಾವುದೇ ವಿಚಾರಣೆಯನ್ನೂ ಈ ಕಾನೂನಿನ

ವ್ಯಾಪ್ತಿಯೊಳಗೆ ತರಲಾಗುತ್ತದೆ. ಇನ್ನು ಮುಂದೆ ಆರಕ್ಷಕಾಧೀಕ್ಷಕರಿಗಿಂತ (ಪೋಲಿಸ್ ಸೂಪರಿಂಟೆಂಡೆಂಟ್) ಕೆಳ ದರ್ಜೆಯ ಅಧಿಕಾರಿಗಳು ಬ್ಯಾಂಕುಗಳನ್ನು ವಿಚಾರಣೆಗಾಗಿ ಅಸಲಿ ದಾಖಲೆಗಳನ್ನು ಸಲ್ಲಿಸುವಂತೆ ಕೇಳುವಂತಿಲ್ಲ.

ಬ್ಯಾಂಕಿನ ಅಸಲಿ ಪುಸ್ತಕಗಳು ನಿಯಮಕ್ಕನುಗುಣವಾಗಿ ನಿರ್ದಿಷ್ಟ ಕಾಲಾವಧಿಯನಂತರ ನಾಶಗೊಳಿಸಲ್ಪಟ್ಟಿದಲ್ಲಿ ಅವುಗಳನ್ನು ನಾಶಗೊಳಿಸುವುದಕ್ಕೆ ಮುಂಚೆ ತೆಗೆದಿರಿಸಿಕೊಂಡ ಪ್ರತಿಗಳಿಗೆ (ಉದಾ: ಸೂಕ್ಷ್ಮಚಿತ್ರ : ಮೈಕ್ರೋಫಿಲಂ) ಅಸಲಿ ಪ್ರತಿಗಳಷ್ಟೆ ಮಾನ್ಯತೆ ಸಿಗುತ್ತದೆ. ಆದರೆ ಅಂತಹ ಪ್ರತಿಗಳನ್ನು ಸಲ್ಲಿಸುವಾಗ ಪ್ರತಿಗಳನ್ನು ದೃಢೀಕರಿಸಿ ಅಸಲಿ ಪ್ರತಿಗಳನ್ನು ನಾಶಮಾಡಿದುದನ್ನೂ ದೃಢೀಕರಿಸಬೇಕು.

ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ 1949ಕ್ಕೆ ಮಾಡಲಾಗಿರುವ ತಿದ್ದುಪಡಿಗಳು ಬ್ಯಾಂಕ್‌ಗಳ, ಹಾಗೂ ಬ್ಯಾಂಕ್ ಗ್ರಾಹಕರ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದವೂ ಪ್ರಯೋಜನಕಾರಿಯಾದವೂ ಆಗಿವೆ.

ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮಕ್ಕೆ ಸೇರಿಸಲಾಗುವ 4(A) ಎಂಬ ಹೊಸ ವಿಧಿಯನ್ವಯ ಬ್ಯಾಂಕುಗಳು ವಿವಿಧ ಸಾಲಗಳ ಮೇಲೆ ವಿಧಿಸುವ ಬಡ್ಡಿದರದ ಯುಕ್ತಾಯುಕ್ತತೆಯನ್ನು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ. ಬ್ಯಾಂಕುಗಳು ಸಾಲಕ್ಕೆ ವಿಧಿಸಿದ ಬಡ್ಡಿ ಹೆಚ್ಚು ಎಂಬ ಏಕೈಕ ಕಾರಣಕ್ಕಾಗಿ ಹೂಡಲಾಗುವ ಯಾವುದೇ ಮೊಕದ್ದಮೆಯನ್ನು ನ್ಯಾಯಾಲಯಗಳು ಸ್ವೀಕರಿಸುವುದಿಲ್ಲ. ಭಾರತೀಯ ಬ್ಯಾಂಕುಗಳು ನೀಡುವ ಸಾಲಗಳು ಕುಸೀದ ಸಾಲಗಳ ಅಧಿನಿಯಮ (1918) (Usarious Loans Act 1918)ರ ವ್ಯಾಪ್ತಿಗೆ ಒಳಪಡುವುದಿಲ್ಲ.

ಬ್ಯಾಂಕಿಂಗ್ ನಿಯಂತ್ರಣ ಕಾಯಿದೆಗೆ ಸೇರಿಸಲಾಗುವ 45(Y) ನಿಯಮ ಬ್ಯಾಂಕ್‌ಗಳು ತಮ್ಮ ಪುಸ್ತಕಗಳನ್ನು, ಪಾವತಿಮಾಡಿದ ಸಂಲೇಖಗಳನ್ನು ಎಷ್ಟು ಕಾಲದವರೆಗೆ ಸಂರಕ್ಷಿಸಬೇಕೆಂಬುದರ ಬಗ್ಗೆ ನಿಯಮಗಳನ್ನು ಮಾಡುವ ಅಧಿಕಾರವನ್ನು ಕೇಂದ್ರ ಸರಕಾರಕ್ಕೆ ನೀಡುತ್ತದೆ. 45(Z) ನಿಯಮ ಪಾವತಿಯಾದ ಚೆಕ್ಕುಗಳನ್ನು ಮೇಲಿನ ನಿಯಮದೊಳಗಿನ ಕಾಲಾವಧಿಯಲ್ಲಿ ಹಿಂದಿರುಗಿಸಬೇಕಾದ ಸಂದರ್ಭಗಳಲ್ಲಿ ಆ ಚೆಕ್ಕುಗಳ ನಕಲುಗಳನ್ನು ತನ್ನಲ್ಲಿ ಇಟ್ಟುಕೊಳ್ಳುವುದನ್ನು ಕಡ್ಡಾಯಗೊಳಿಸುತ್ತದೆ. ಈ ರೀತಿಯ ಸೌಲಭ್ಯ ಬಯಸುವ ಗ್ರಾಹಕರು ಈ ಪ್ರತಿಗಳನ್ನು ತೆಗೆಯುವ ವೆಚ್ಚವನ್ನು ಬ್ಯಾಂಕ್‌ಗಳಿಗೆ ತುಂಬಿಕೊಡಬೇಕಾಗುತ್ತದೆ. ಇದಕ್ಕೆ ಸಂಬಂಧಿಸಿದ ನಿರ್ದೇಶನಗಳನ್ನು ಕೇಂದ್ರ ಸರಕಾರ ಭಾರತೀಯ ರಿಸರ್ವ್ ಬ್ಯಾಂಕ್‌ನೊಡನೆ ಸಮಾಲೋಚಿಸಿ ರಾಜ್ಯಪತ್ರದಲ್ಲಿ ಪ್ರಕಟಿಸುವುದರ ಮೂಲಕ ಜಾರಿಗೊಳಿಸುತ್ತದೆ.

45(ZA)ದಿಂದ 45(ZF) ಎಂದು ಹೆಸರಿಸಿರುವ ಆರು ವಿಧಿಗಳು ಬ್ಯಾಂಕ್ ಗ್ರಾಹಕರ ದೃಷ್ಟಿಯಿಂದ ಅತ್ಯಂತ ಪ್ರಯೋಜನಕಾರಿಯಾದವುಗಳಾಗಿವೆ. ಪ್ರಸ್ತುತ ಬ್ಯಾಂಕ್ ಠೇವಣಿದಾರರಿಗೆ ತಮ್ಮ ಮರಣಾನಂತರ ಬ್ಯಾಂಕಿನಲ್ಲಿಟ್ಟಿರುವ ಠೇವಣಿಯನ್ನು ಯಾರಿಗೆ ಪಾವತಿಮಾಡಬೇಕೆಂದು ತಿಳಿಸುವ ಸೌಲಭ್ಯ ಇಲ್ಲ.

ಅಂಚೆ ಕಚೇರಿಯ ಉಳಿತಾಯ ಖಾತೆ ಹಾಗೂ ಇತರ ಠೇವಣಿದಾರರಿಗೆ ಈ ತೆರನ ನಾಮಕರಣ ಸೌಲಭ್ಯ ಹಲವು ದಶಕಗಳಿಂದ ಇರುವುದಾದರೂ ಬ್ಯಾಂಕು ಠೇವಣಿದಾರರಿಗೆ ಈ ಸೌಲಭ್ಯ ನೀಡದಿದ್ದುದು ಸೋಜಿಗದ ಸಂಗತಿಯಾಗಿವೆ.

ಈ ಸೌಲಭ್ಯವನ್ನು ಒದಗಿಸಬೇಕೆಂದು ಹಲವಾರು ಬಾರಿ ಬ್ಯಾಂಕ್ ಠೇವಣಿದಾರರ ಸಂಘ ಹಲವಾರು ಕೇಂದ್ರ ಹಣಕಾಸು ಸಚಿವರನ್ನು ಒತ್ತಾಯಿಸಿದೆ. ಸಂಸತ್ ಸದಸ್ಯರು ತಮ್ಮ ಭಾಷಣಗಳಲ್ಲಿ ಈ ಬೇಡಿಕೆಯನ್ನು ಸಮರ್ಥಿಸಿದ್ದಾರೆ. ಬ್ಯಾಂಕ್ ಅಧಿಕಾರಿಗಳ/ನೌಕರರ ಸಂಘಗಳು ಈ ಸೌಲಭ್ಯವನ್ನು ಠೇವಣಿದಾರರಿಗೆ ಒದಗಿಸಬೇಕೆಂದು ಒತ್ತಿಹೇಳಿವೆ. ಹಿಂದೆ ಜನತಾ ಸರಕಾರ ಅಸ್ತಿತ್ವದಲ್ಲಿದ್ದಾಗ ಇದಕ್ಕೆ ಸಂಬಂಧಿಸಿದಂತೆ ಲೋಕಸಭೆಯಲ್ಲಿ ಮಂಡಿತವಾಗಿದ್ದ ಮಸೂದೆಯೊಂದು ಲೋಕಸಭೆ ವಿಸರ್ಜನೆಯಾದ ಕಾರಣದಿಂದ ವ್ಯಪಗತವಾದುದನ್ನು ನಾವು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಪ್ರಸ್ತುತ ಮರಣ ಶಾಸನವೊಂದನ್ನು ಬರೆಯುವುದೇ ಠೇವಣಿದಾರರಿಗೆ ಇರುವ ಏಕೈಕ ಮಾರ್ಗ.

ಭಾರತೀಯ ಬ್ಯಾಂಕುಗಳು ಈ ಸಮಸ್ಯೆಯನ್ನು ಪರಿಹರಿಸಲು ಈವರೆಗೆ ತಮ್ಮದೇ ಆದ ಪರಿಹಾರೋಪಾಯಗಳನ್ನು ಕಂಡುಹಿಡಿದುಕೊಂಡಿವೆ. ಆದರೆ ಅವು ಯಾವುವೂ ಪರಿಪೂರ್ಣವಲ್ಲ. ಇವುಗಳಲ್ಲಿ ಮೊದಲನೆಯದು ತಮ್ಮ ಗ್ರಾಹಕರು ಜಂಟೀಖಾತೆಗಳನ್ನು ತೆರೆಯುವಂತೆ ಮನವೊಲಿಸುವುದು. ಭಾರತೀಯ ಬ್ಯಾಂಕರ್‌ಗಳ ಸಂಘ ಈ ನಿಟ್ಟಿನಲ್ಲಿ ಗ್ರಾಹಕರಿಗೆ ಜಂಟೀಖಾತೆಗಳನ್ನು ತೆರೆಯುವುದರ ಮೂಲಕ ದೊರೆಯುವ ಪ್ರಯೋಜನಗಳನ್ನು ಮನದಟ್ಟುಮಾಡಿಕೊಡಲು ಪ್ರಚಾರಾಂದೋಲನವೊಂದನ್ನು ಇತ್ತೀಚೆಗೆ ನಡೆಸಿತು. ಈ ರೀತಿ ಜಂಟೀಖಾತೆ ತೆಗೆದು ತಮ್ಮ ಮರಣಾನಂತರ ಬದುಕುಳಿದವರಿಗೆ ಹಣ ನೀಡುವಂತೆ ನಿರ್ದೇಶನ ನೀಡಿದರೆ ಬದುಕುಳಿದ ಖಾತೆದಾರನಿಗೆ ಹಣ ಪಾವತಿ ಮಾಡಲಾಗುತ್ತದೆ.ಈ ರೀತಿಯ ಸೌಲಭ್ಯವನ್ನು ಭಾರತೀಯ ಕರಾರು ಅಧಿನಿಯಮದ ಚೌಕಟ್ಟಿಗೆ ಒಳಪಟ್ಟು ಜಂಟೀ ಆಶ್ವಾಸನೆಗೆ ಸಂಬಂಧಿಸಿದ ಹಾಗೆ ಪರಿಗಣಿಸಲಾಗುತ್ತದೆ. ಆದುದರಿಂದ ಮೃತರಾದವರ ಆಸ್ತಿಯ ವಾರಸುದಾರರು ಆಕ್ಷೇಪ ಎತ್ತಿದಲ್ಲಿ ಅದು ಇತ್ಯರ್ಥವಾಗುವವರೆಗೆ ಬದುಕುಳಿದ ಖಾತೆದಾರನಿಗೆ ಬ್ಯಾಂಕುಗಳು ಹಣ ಪಾವತಿಮಾಡುವುದಿಲ್ಲ.

ಬ್ಯಾಂಕ್ ಖಾತೆಗಳು ಠೇವಣಿದಾರನೊಬ್ಬನ ಹೆಸರಿನಲ್ಲಿಯೇ ಇದ್ದು ಆತ ಮರಣಹೊಂದಿದರೆ ಆತನ ಆಸ್ತಿಯ ವಾರಸುದಾರರು ಭಾರತೀಯ ವಾರಸುದಾರಿಕೆ ಕಾಯಿದೆ 1925ರ ಮೊರೆಹೊಗಬೇಕು. ವಿಧಿ 370ರ ಅನ್ವಯ ನ್ಯಾಯಾಲಯದಿಂದ ವಾರಸುದಾರಿಕೆ ಪತ್ರ ಪಡೆದು ಸಲ್ಲಿಸ

ಬೇಕು. ಮೃತರು ಉಯಿಲು ಪತ್ರ ಬರೆದಿಟ್ಟದ್ದಲ್ಲಿ ಅದರ ಪ್ರಮಾಣಿತ ಪ್ರತಿಯನ್ನು ಸಲ್ಲಿಸಬೇಕು. ವಾರಸುದಾರಿಕೆ ಪತ್ರ ಪಡೆಯಲು ನ್ಯಾಯಾಲಯದ ಕಟ್ಟೆ ಹತ್ತಬೇಕಾಗಿರುವುದರಿಂದ ವಾರಸುದಾರರಿಗೆ ಸಾಕಷ್ಟು ಕಾಲವ್ಯಯ ಹಾಗೂ ಧನವ್ಯಯ ನಿಶ್ಚಿತ. ಉಯಿಲಿನ ಪ್ರಮಾಣಿತ ಪತ್ರ ಪಡೆಯಲೂ ಸಹ ನ್ಯಾಯಾಲಯದ ಮೊರೆಹೊಗಬೇಕು. ವಾರಸುದಾರಿಕೆ ಪತ್ರವನ್ನು ಮೃತರು ನೀಡಿದ ಸಾಲ ಹಾಗೂ ಪ್ರತಿಭೂತಿಗಳಿಗೆ ಮಾತ್ರ ಅನ್ವಯವಾಗುವಂತೆ ನೀಡಬಹುದಾದ್ದರಿಂದ ಭದ್ರ ಸುಫರ್ದು ಮತ್ತು ಭದ್ರತಾ ಕಪಾಟುಗಳಲ್ಲಿರುವ ವಸ್ತುಗಳನ್ನು ವಾರಸುದಾರಿಕೆ ಪತ್ರ ಪಡೆದವರಿಗೆ ನೀಡುವಂತಿಲ್ಲ.

ಖಾತೆಯಲ್ಲಿ ಉಳಿದಿರುವ ಶಿಲ್ಕನ್ನು ಗಮನದಲ್ಲಿರಿಸಿಕೊಂಡು ವಾರಸುದಾರಿಕೆ ಪತ್ರ ಅಥವಾ ದೃಢೀಕೃತ ಉಯಿಲು ಸಲ್ಲಿಸದೆಯೇ ಮೃತರ ಹತ್ತಿರದ ಸಂಬಂಧಿಗಳಿಗೆ ಹಣ ಪಾವತಿಮಾಡುವ ಪದ್ಧತಿಯನ್ನು ಕೆಲವು ಬ್ಯಾಂಕ್‌ಗಳು ಹೊಂದಿವೆ. ಇಂತಹ ಸಂದರ್ಭಗಳಲ್ಲಿ ವಾರಸುದಾರರು ಪ್ರಮಾಣಪತ್ರ ಹಾಗೂ ನಷ್ಟ ಭರ್ತಿ ಕರಾರು ಪತ್ರ ನೀಡಬೇಕಾಗುತ್ತದೆ.

ಈಗ ಅಂಗೀಕಾರವಾಗಿರುವ ತಿದ್ದುಪಡಿ ಜಾರಿಗೆ ಬಂದನಂತರ ಬ್ಯಾಂಕ್ ಖಾತೆದಾರರಿಗೆ ತಮ್ಮ ಖಾತೆಯ ಶಿಲ್ಕಿಗೆ ವಾರಸುದಾರರನ್ನು ನಾಮಕರಣಮಾಡುವ ಸೌಲಭ್ಯ ದೊರೆಯುತ್ತದೆ. ನಾಮಕರಣಮಾಡಲ್ಪಟ್ಟ ವಾರಸುದಾರನು ಖಾತೆದಾರನ ನಿಧನವನಂತರ ಅಲ್ಲಿಯ ಶಿಲ್ಕಿಗೆ ಏಕೈಕ ಹಕ್ಕುದಾರನಾಗುತ್ತಾನೆ. ಜಂಟೀಖಾತೆಗಳನ್ನುಳ್ಳವರೂ ವಾರಸುದಾರರನ್ನು ನಾಮಕರಣಮಾಡುವ ಸೌಲಭ್ಯ ಕಲ್ಪಿಸಿಕೊಡಲಾಗಿದೆ.

ಅತ್ಯಂತ ಪ್ರಗತಿಗಾಮಿಯಾದ ಈ ತಿದ್ದುಪಡಿ ಭದ್ರ ಸುಫರ್ದು, ಭದ್ರತಾ ಕಪಾಟು ಖಾತೆಗಳಿಗೂ ಅನ್ವಯವಾಗುವಂತಿದ್ದು ತಮ್ಮ ಮರಣಾನಂತರ ಅವುಗಳನ್ನು ಮರಳಿಸಬೇಕಾದವರನ್ನು ನಾಮಕರಣಮಾಡುವ ಸೌಲಭ್ಯ ದೊರೆಯುತ್ತದೆ.

ಅಪ್ರಾಪ್ತವಯಸ್ಕರನ್ನು ನಾಮಕರಣ ಮಾಡಬಹುದಾಗಿದ್ದು, ಅವರ ಪರವಾಗಿ ಯಾರು ಶಿಲ್ಕನ್ನು ಸ್ವೀಕರಿಸಬೇಕೆಂಬುದರ ಬಗ್ಗೆ ನಿರ್ಧರಿಸಲೂ ಖಾತೆದಾರನಿಗೆ ಅಧಿಕಾರವಿದೆ.

ಈ ರೀತಿ ಠೇವಣಿಗಳನ್ನೂ, ಭದ್ರ ಸುಫರ್ದಿನಲ್ಲಿದ್ದ ವಸ್ತುಗಳನ್ನೂ, ಭದ್ರತಾ ಕಪಾಟಿನಲ್ಲಿಡಲಾಗಿದ್ದ ವಸ್ತುಗಳನ್ನೂ ನಾಮಕರಣಹೊಂದಿದ ವ್ಯಕ್ತಿಗೆ ಹಿಂತಿರುಗಿಸಿ ಬ್ಯಾಂಕರ್ ಪಡೆಯುವ ರಶೀದಿ ಕಾನೂನುಬದ್ಧವಾಗಿದ್ದು, ಹಿಂತಿರುಗಿಸಿದ ಕಾರಣಕ್ಕಾಗಿ ಖಾತೆದಾರನ ಆಸ್ತಿಯ ವಾರಸುದಾರರು ಬ್ಯಾಂಕ್‌ನ ವಿರುದ್ಧ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡುವಂತಿಲ್ಲ. ಈ ತಿದ್ದುಪಡಿ ತರುವುದು ಈಗಲೇ ಬಹಳಷ್ಟು ತಡವಾದರೂ ಅತ್ಯಂತ ಉತ್ತಮ ರೀತಿಯಲ್ಲಿ ತಿದ್ದುಪಡಿ ತರಲಾಗಿದ್ದು. ಈ ಸೌಲಭ್ಯವನ್ನು ಜಾರಿಗೆ ತರುವ ದಿನಾಂಕವನ್ನು ಕಾತರದಿಂದ ಕಾಯಲಾಗುತ್ತಿದೆ ಎಂದರೆ ತಪ್ಪಾಗಲಾರದು.

ಇನ್ನುಮುಂದೆ, ಅತ್ಯಂತ ವಿವಾದಕ್ಕೆ ಒಳಗಾಗಿರುವ ತಿದ್ದುಪಡಿಯ ಬಗ್ಗೆ ತಿಳಿಯೋಣ. ಈ ತಿದ್ದುಪಡಿ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ 1934ಕ್ಕೆ ಸಂಬಂಧಿಸಿದುದು. ಈ ಕಾಯಿದೆಯ 45ನೆಯ ವಿಧಿಗೆ 45(R), 45(S), 45(T) ಎಂಬ ಮೂರು ಉಪವಿಧಿಗಳನ್ನು ಸೇರಿಸಲಾಗಿದೆ. ಈ ವಿಧಿಯು 'ವ್ಯಕ್ತಿಗಳು', 'ಪಾಲುಗಾರಿಕೆ ಸಂಸ್ಥೆಗಳು', 'ಅನಿಗಮಿತ ಸಂಘಗಳು' ಸ್ವೀಕರಿಸುವ ಠೇವಣಿಗಳನ್ನು ನಿಯಂತ್ರಿಸುವ ಉದ್ದೇಶ ಹೊಂದಿದೆ. ಈ ವಿಧಿಯಂತೆ ಯಾವುದೇ ವ್ಯಕ್ತಿ 25ಕ್ಕಿಂತ ಹೆಚ್ಚು ಜನರಿಂದ, ಯಾವುದೇ ಪಾಲುದಾರಿಕೆ ಸಂಸ್ಥೆ ಪ್ರತಿ ಪಾಲುದಾರನಿಗೆ 25ಕ್ಕಿಂತ (ಗರಿಷ್ಠ 250), ಅನಿಗಮಿತ ಸಂಸ್ಥೆ 250ಕ್ಕಿಂತ ಹೆಚ್ಚು ಜನರಿಂದ ಠೇವಣಿ ಸ್ವೀಕರಿಸುವುದನ್ನು ನಿಷೇಧಿಸುತ್ತದೆ.

ಈ ನಿಯಮ ಜಾರಿಗೆ ಬಂದಂದಿನಿಂದ ಎರಡು ವರ್ಷಗಳೊಳಗೆ ಎಲ್ಲ ವ್ಯಕ್ತಿಗಳೂ ಸಂಸ್ಥೆಗಳೂ ಸಂಘಗಳೂ ತಮ್ಮ ಠೇವಣಿದಾರರ ಸಂಖ್ಯೆಯನ್ನು ಮೇಲಿನ ಮಿತಿಯೊಳಗೆ ತರಬೇಕಾಗುತ್ತದೆ. 6 ತಿಂಗಳಿಗಿಂತ ಹೆಚ್ಚಿನ ಕಾಲಾವಧಿಯ ಸಾಲಗಳನ್ನು ಠೇವಣಿಗಳೆಂದೇ ಪರಿಗಣಿಸಲಾಗುತ್ತದೆ. ಈ ವ್ಯಕ್ತಿಗಳು, ಸಂಸ್ಥೆಗಳು, ಸಂಘಗಳು ತಮ್ಮ ಹತ್ತಿರದ ಸಂಬಂಧಿಗಳಿಂದ ಸ್ವೀಕರಿಸುವ ಠೇವಣಿಗಳಿಗೆ ವಿನಾಯ್ತಿ ಇದೆ. ಈ ಹತ್ತಿರದ ಸಂಬಂಧಿಗಳ ಪಟ್ಟಿಯನ್ನು ಇಲ್ಲಿ ಸೇರಿಸಲಾಗಿದೆ. ಅಮಾಯಕ ಠೇವಣಿದಾರರನ್ನು ರಕ್ಷಿಸುವುದು ಈ ತಿದ್ದುಪಡಿಯ ಉದ್ದೇಶ ಎಂದು ಸರಕಾರ ಹೇಳಿದೆ.

ಪ್ರಸ್ತುತ ಅನಿಗಮಿತ ಸಂಘಗಳು, ಸಂಸ್ಥೆಗಳು ಹಾಗೂ ವ್ಯಕ್ತಿಗಳು ಸ್ವೀಕರಿಸುವ ಠೇವಣಿಗಳ ಮೇಲೆ ಭಾರತೀಯ ರಿಸರ್ವ್ ಬ್ಯಾಂಕ್‌ಗೆ ಯಾವುದೇ ಅಧಿಕಾರ ಇಲ್ಲ. ನಿಯಮಿತ ಸಂಸ್ಥೆಗಳು ಸ್ವೀಕರಿಸಬಹುದಾದ ಠೇವಣಿಗಳ ಮೇಲೆ ಭಾರತೀಯ ರಿಸರ್ವ್ ಬ್ಯಾಂಕ್ ನಿರ್ಬಂಧ ವಿಧಿಸಿದೆ. ಕಂಪನಿಗಳ (ಠೇವಣಿಗಳ ಸ್ವೀಕಾರ) ನಿಯಮ 1975ರ ಅನ್ವಯ ನೋಂದಾಯಿತ ಕಂಪನಿಗಳು ಸ್ವೀಕರಿಸಬಹುದಾದ ಠೇವಣಿಗಳ ಮೊತ್ತವನ್ನು ನಿಗದಿಪಡಿಸಲಾಗಿದೆ. ತನ್ನ ಪಾವತಿಯಾದ ಬಂಡವಾಳ ಹಾಗೂ ಯಾವುದೇ ನಿಶ್ಚಿತ ಉದ್ದೇಶಕ್ಕೆ ಮೀಸಲಿಡದ ಆಪದ್ಧನದ ಶೇ. 25ರಷ್ಟನ್ನು ಕಂಪನಿ ಸಾರ್ವಜನಿಕರಿಂದ ಈ ಠೇವಣಿಯಾಗಿ ಸ್ವೀಕರಿಸಬಹುದು. ಇದರ ಜೊತೆಗೆ ತನ್ನ ಷೇರುದಾರರಿಂದ ತನ್ನ ಪಾವತಿಯಾದ ಬಂಡವಾಳ ಹಾಗೂ ನಿರ್ದಿಷ್ಟ ಉದ್ದೇಶಕ್ಕೆ ಮೀಸಲಿರದ ಆಪದ್ಧನದ ಶೇ. 10ರಷ್ಟನ್ನು ಠೇವಣಿಯಾಗಿ ಸ್ವೀಕರಿಸಬಹುದು. ಠೇವಣಿಯ ಗರಿಷ್ಠ ಕಾಲಾವಧಿ 3 ವರ್ಷ. ಗರಿಷ್ಠ ಬಡ್ಡಿದರ 15%. ಮೇಲೆ ಹೇಳಿದ ನಿರ್ಬಂಧಗಳು ಠೇವಣಿದಾರರ ಹಿತರಕ್ಷಣೆಯ ಜೊತೆಜೊತೆಗೆ ಕಂಪನಿಗಳು ಠೇವಣಿ

ಸಂಗ್ರಹಣೆಯಲ್ಲಿ ಬ್ಯಾಂಕ್‌ಗಳೊಡನೆ ಸ್ಪರ್ಧಿಸುವುದನ್ನು ನಿಯಂತ್ರಿಸುವ ಆಶಯ ಹೊಂದಿವೆ.

ಈಗ ತಂದಿರುವ ತಿದ್ದುಪಡಿಯನ್ನು ಮೇಲಿನ ನಿಯಮಗಳೊಂದಿಗೆ ಹೋಲಿಸಿದಾಗ ಕೆಲವು ಸಂಗತಿಗಳು ಅಚ್ಚರಿಯನ್ನುಂಟುಮಾಡುತ್ತವೆ. ಈ ತಿದ್ದುಪಡಿ ಠೇವಣಿದಾರರ ಸಂಖ್ಯೆಯನ್ನು ನಿಯಂತ್ರಿಸುತ್ತದೆಯೇ ಹೊರತು ಠೇವಣಿಯ ಮೊತ್ತವನ್ನಲ್ಲ. ಹೀಗಾಗಿ ಕೇವಲ 1 ರೂ. ಬಂಡವಾಳವುಳ್ಳ ವ್ಯಕ್ತಿ, ಪಾಲುದಾರಿಕೆ ಸಂಸ್ಥೆ, ಅನಿಯಮಿತ ಸಂಘ, ಎಷ್ಟು ಹಣವನ್ನಾದರೂ ಠೇವಣಿಯನ್ನಾಗಿ ಸ್ವೀಕರಿಸಬಹುದು. ಪಡೆಯಬಹುದಾದ ಠೇವಣಿಗೂ, ಸಂಸ್ಥೆಯ ಆರ್ಥಿಕ ಸಾಮರ್ಥ್ಯಕ್ಕೂ ಯಾವುದೇ ವಿಧದ ಸಂಬಂಧ ಇಲ್ಲದಿರುವುದರಿಂದ ಠೇವಣಿದಾರರ ಹಿತರಕ್ಷಣೆಯಾಗದು. ಬಹುಶಃ ಹೆಚ್ಚು ಹಣ ತೊಡಗಿಸುವ ಠೇವಣಿದಾರರು ಸಾಕಷ್ಟು ಮುಂಜಾಗರೂಕತೆ ವಹಿಸಿ ಆ ವ್ಯಕ್ತಿಯ, ಸಂಸ್ಥೆಯ, ಸಂಘದ ಆರ್ಥಿಕ ಸಾಮರ್ಥ್ಯವನ್ನು ಅಳೆಯಬಲ್ಲವರೆಂದು ಸರಕಾರ ಭಾವಿಸಿರಬಹುದು. ನಿರ್ದಿಷ್ಟ ಗಡುವು ಮೀರಿದ ವ್ಯಾಪಾರಿ ಸಾಲಗಳನ್ನು ಠೇವಣಿಗಳೆಂದು ಪರಿಗಣಿಸುವುದರಿಂದ ಅನೌಪಚಾರಿಕ ಉದರಿ ಮಾರುಕಟ್ಟೆ ಅಸ್ತವ್ಯಸ್ತವಾಗಿ ಅದನ್ನೇ ನಂಬಿರುವ ಸಂಸ್ಥೆಗಳು ತೊಂದರೆಗೆ ಸಿಲುಕಬಹುದು. ಕಪ್ಪು ಹಣದ ವಹಿವಾಟನ್ನು ನಿಯಂತ್ರಿಸುವುದು ಈ ಕಾನೂನಿನ ಉದ್ದೇಶ ಎಂದು ಹಲವರು ಅಭಿಪ್ರಾಯಪಟ್ಟಿದ್ದಾರೆ.

ಇತ್ತೀಚೆಗೆ ಹಲವಾರು ಭಾಗಿದಾರಿ ಸಂಸ್ಥೆಗಳು ಸಾರ್ವಜನಿಕರಿಂದ ವಿವಿಧ ರೀತಿಯ ಠೇವಣಿಗಳನ್ನು ಸಂಗ್ರಹಿಸಿ ಕೋಟ್ಯಂತರ ರೂಪಾಯಿಗಳ ಠೇವಣಿ ಸಂಗ್ರಹಿಸಿದ್ದಾಗ್ಯೂ ಠೇವಣಿದಾರರು ನಷ್ಟ ಅನುಭವಿಸಿದಾಗ ಭಾರತೀಯ ರಿಸರ್ವ್ ಬ್ಯಾಂಕ್ ಯಾವುದೇ ಕ್ರಮ ತೆಗೆದುಕೊಳ್ಳಲಾಗದೆ ಭಾರತೀಯ ಅಪರಾಧ ಸಂಹಿತೆಯ ಅಡಿಯಲ್ಲಿ ಸಂಸ್ಥೆಯ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಬೇಕಾಯಿತು. ಈ ತಿದ್ದುಪಡಿ ಜಾರಿಗೆ ಬಂದನಂತರ ಇದನ್ನು ಉಲ್ಲಂಘಿಸುವವರಿಗೆ ವಿಧಿಸುವ ಶಿಕ್ಷೆ ತೀವ್ರಸ್ವರೂಪದ್ದಾಗಿದೆ. ಯಾವುದೇ ವ್ಯಕ್ತಿ ಈ ನಿಯಮಗಳನ್ನು ಉಲ್ಲಂಘಿಸಿರುವ ಸಂಶಯ ಬಂದರೆ ಸರಕಾರಿ ಅಧಿಕಾರಿಗಳು ಅವನ ನಿವಾಸವನ್ನೂ, ವ್ಯಾಪಾರದ ಸ್ಥಳವನ್ನೂ ಪ್ರವೇಶಿಸುವ ಹಾಗೂ ಶೋಧಿಸುವ ಅಧಿಕಾರ ಕೊಡಲಾಗಿದೆ. ಈ ನಿಯಮಗಳ ಉಲ್ಲಂಘನೆಗೆ 1ರಿಂದ 2 ವರ್ಷಗಳ ವರೆಗಿನ ಕಾರಾಗೃಹ ವಾಸವನ್ನು ಅಥವಾ 2,000 ರೂ.ಗಳ ವರೆಗೆ ದಂಡವನ್ನು ಅಥವಾ ಇವೆರಡನ್ನೂ ವಿಧಿಸಬಹುದಾಗಿದೆ.

ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ 1949ಕ್ಕೆ ಮಾಡಿರುವ ತಿದ್ದುಪಡಿಯಂತೆ ಬ್ಯಾಂಕಿಂಗ್ ಸಂಸ್ಥೆಗಳು ಇಡಬೇಕಾದ ಶಾಸನಬದ್ಧ ಕಾಪಿನ ಪ್ರಮಾಣವನ್ನು ಶೇ. 40ರ ವರೆಗೆ ಏರಿಸಲು ಸಹ ಭಾರತೀಯ ರಿಸರ್ವ್ ಬ್ಯಾಂಕಿಗೆ ಅಧಿಕಾರ ದೊರೆಯುತ್ತದೆ.

---

## ಗುತ್ತಿಗೆ ವ್ಯವಹಾರ ಮತ್ತು ಬ್ಯಾಂಕು

ಬ್ಯಾಂಕಿಂಗ್ ಕಾನೂನುಗಳ (ತಿದ್ದುಪಡಿ) ಅಧಿನಿಯಮದ ಮುಖ್ಯ ಅಂಶಗಳಲ್ಲೊಂದೆಂದರೆ 1949ರ ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮದ ಪ್ರಕರಣ 19 (1)ರ ವ್ಯಾಪ್ತಿಯ ವಿಸ್ತರಣೆ. ಇದರ ಪ್ರಕಾರ ಬ್ಯಾಂಕುಗಳು ಇನ್ನು ಮುಂದೆ ಈ ಅಧಿನಿಯಮದ ಪ್ರಕರಣ 6 (1)ರ (ಎ) ಯಿಂದ (ಒ) ವರೆಗಿನ ಖಂಡಗಳಲ್ಲಿ ಉಲ್ಲೇಖಿಸಲಾದ ಯಾವುದೇ ವ್ಯವಹಾರ ನಡೆಸುವ ಉದ್ದೇಶದಿಂದ ಸಹಾಯಕ ಕಂಪನಿಗಳನ್ನು (ಸಬ್ಸಿಡಿಯರಿ ಕಂಪನಿ) ರಚಿಸಬಹುದು. ದೇಶದಲ್ಲಿ ಬ್ಯಾಂಕಿಂಗನ್ನು ಹಬ್ಬಿಸಲು ಅಥವಾ ಸಾರ್ವಜನಿಕ ಹಿತದ ದೃಷ್ಟಿಯಿಂದ ಯಾವುದೇ ಬಗೆಯ ವ್ಯವಹಾರವನ್ನು ನಿರ್ವಹಿಸಬಹುದು. ಇಂಥ ವ್ಯವಹಾರಗಳು ಯಾವುವೆಂಬುದನ್ನು ಸರ್ಕಾರದ ಅನುಮೋದನೆಯೊಡನೆ ರಿಸರ್ವ್ ಬ್ಯಾಂಕ್ ಪ್ರಕಟಿಸುತ್ತದೆ.

ಈ ಉಪಬಂಧದ (ಪ್ರಾವಿಷನ್) ಅಡಿಯಲ್ಲಿ ಬ್ಯಾಂಕುಗಳು ಗುತ್ತಿಗೆ ವ್ಯವಹಾರದ (ಲೀಸಿಂಗ್ ಬಿಸನೆಸ್) ಕ್ಷೇತ್ರವನ್ನು ಪ್ರವೇಶಿಸಲು ಹವಣಿಸುತ್ತಿವೆ. ಹೊಸ ಕೈಗಾರಿಕೆಗಳಿಗೆ ಅಗತ್ಯವಾದ ಆಸ್ತಿಗಳನ್ನು ಗುತ್ತಿಗೆಯ ಮೇಲೆ ಒದಗಿಸುವ ಸಹಾಯಕ ಕಂಪನಿಗಳನ್ನು ಸ್ಥಾಪಿಸಿ ನಡೆಸುವುದು ಅತ್ಯಂತ ಲಾಭದಾಯಕ ಹಾಗೂ ಉಪಯುಕ್ತ ಎನ್ನಲಾಗಿದೆ.

# ಚಲಾರ್ಥ ಕೋಠಿಗಳು

ಜಿ. ಎನ್. ನರಸಿಂಹ ಮೂರ್ತಿ

ಚಲಾರ್ಥ ಕೋಠಿಗಳು ಅಥವಾ ಕರೆನ್ಸಿ ಕೋಠಿಗಳೆಂದರೆ ಕರೆನ್ಸಿ ನೋಟುಗಳು ಹಾಗೂ ನಾಣ್ಯ ರೂಪದ ನಗದು ಹಣ ಇರುವ ಸ್ಥಳ. ಬ್ಯಾಂಕಿಂಗಿನಲ್ಲಿ ಇದು ಸ್ವಲ್ಪ ವಿಶೇಷ ಅರ್ಥದಲ್ಲಿ ಬಳಸಲ್ಪಡುತ್ತದೆ. ಭಾರತೀಯ ರಿಸರ್ವ್ ಬ್ಯಾಂಕಿನ ಪರವಾಗಿ ಹಣವನ್ನು ಇಟ್ಟುಕೊಳ್ಳಲು, ವಿತರಿಸಲು ಪರವಾನಗಿ ಪಡೆದ ಬ್ಯಾಂಕು ಈ ನಗದು ಹಣವನ್ನಿರಿಸುವ ಸ್ಥಳವೇ ಕರೆನ್ಸಿ ಕೋಠಿ. ಚಿಲ್ಲರೆ ನಾಣ್ಯಗಳು ಹೊರತಾಗಿ ಭಾರತ ಸರ್ಕಾರದ ಒಂದು ರೂ. ನಾಣ್ಯ, ನೋಟುಗಳು ಹಾಗೂ ಮೇಲ್ಪಟ್ಟ ಎಲ್ಲ ಮೌಲ್ಯಗಳ ನೋಟುಗಳನ್ನು ಇಲ್ಲಿ ಇಡಲಾಗುತ್ತದೆ.

1934ನೆಯ ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮದ 20, 21ನೆಯ ಪ್ರಕರಣಗಳ ಪ್ರಕಾರ ರಿಸರ್ವ್ ಬ್ಯಾಂಕು ಕೇಂದ್ರ ಸರಕಾರದ ಖಾತೆಗೆ ಹಾಗೂ ಪರವಾಗಿ ಹಣವನ್ನು ಸ್ವೀಕರಿಸುವ, ಹಾಗೂ ಆ ಖಾತೆಯಲ್ಲಿರುವಷ್ಟು ಮೊತ್ತದ ಹಣವನ್ನು ಪಾವತಿ ಮಾಡುವ ಹಾಗೂ ಅದಕ್ಕೆ ಸಂಬಂಧಿಸಿದ ನಗದು ವಿನಿಮಯ, ನಗದು ರವಾನೆ, ಸಾರ್ವಜನಿಕ ಸಾಲಗಳ ನಿರ್ವಹಣೆ ಮತ್ತು ಇತರ ಬ್ಯಾಂಕಿಂಗ್ ಕಾರ್ಯಗಳನ್ನು ನಡಸಬೇಕಾಗಿರುತ್ತದೆ. ಈ ಬಗೆಗೆ ರಿಸರ್ವ್ ಬ್ಯಾಂಕು, ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳ ನಡುವೆ ಒಪ್ಪಂದಗಳು ಏರ್ಪಟ್ಟಿವೆ. ರಿಸರ್ವ್ ಬ್ಯಾಂಕು ಮುಖ್ಯವಾಗಿ ತನ್ನ ಕರೆನ್ಸಿ ಕೋಠಿಗಳಿಂದ ಈ ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ. ಆದರೆ ಎಲ್ಲ ಕಡೆಗಳಲ್ಲಿ ರಿಸರ್ವ್ ಬ್ಯಾಂಕು ತನ್ನ ಶಾಖೆಗಳನ್ನು ತೆರೆಯಲಾಗುವುದಿಲ್ಲ. ರಾಜ್ಯ ಸರ್ಕಾರದ ಖಜಾನೆಗಳು, ಭಾರತೀಯ ಸ್ಟೇಟ್ ಬ್ಯಾಂಕಿನ ಅಥವಾ ಅದರ ಸಹವರ್ತಿ ಬ್ಯಾಂಕಿನ ಶಾಖೆಗಳು ಸಾಮಾನ್ಯವಾಗಿ, ರಿಸರ್ವ್ ಬ್ಯಾಂಕು ಇಲ್ಲದ ಸ್ಥಳಗಳಲ್ಲಿ, ಅದರ ಪರವಾಗಿ ಈ ಮುಂಚೆ ತಿಳಿಸಿದ ಕರ್ತವ್ಯಗಳನ್ನು ನೆರವೇರಿಸುತ್ತವೆ.

ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮದ 45 ನೆಯ ಪ್ರಕರಣ ತಿಳಿಸುವಂತೆ ರಿಸರ್ವ್ ಬ್ಯಾಂಕು ಕೇಂದ್ರ ಸರ್ಕಾರದ ಆದೇಶದ ಮೇರೆಗೆ ಯಾವುದೇ ಸ್ಥಳದಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಮಾತ್ರವಲ್ಲದೆ ಯಾರನ್ನು ಬೇಕಾದರೂ ತನ್ನ ಪ್ರತಿನಿಧಿಯಾಗಿ ನೇಮಿಸಿಕೊಳ್ಳಬಹುದು. ಈ ಬಗೆಗೆ ಕೇಂದ್ರ ಸರ್ಕಾರ 11-6-1970ರಲ್ಲಿ ಹೊರಡಿಸಿದ ಪರಿಪತ್ರದ [ನಂ. ಎಫ್ 4 (150)—ಬಿಸಿ/69] ಪ್ರಕಾರ 1970ರ ಬ್ಯಾಂಕಿಂಗ್ ಕಂಪನಿಗಳ ಅಧಿನಿಯಮದ ಮೊದಲ ಅನುಸೂಚಿಯಲ್ಲಿ ಸೂಚಿತವಾದ ಯಾವುದೇ ನಿಗಮವನ್ನು ಮುಂದೆ ಕಾಣಿಸಿದ, ಅಥವಾ ಯಾವುವಾದರೂ, ಸ್ಥಳಗಳಲ್ಲಿ ತನ್ನ ಪ್ರತಿನಿಧಿಯಾಗಿ ನೇಮಿಸಿಕೊಳ್ಳಬಹುದು. ಸ್ಥಳಗಳು : (ಅ) ವಿಶಾಲ ಮುಂಬೈ, ಕಲ್ಕತ್ತ, ನವದೆಹಲಿಯೂ ಸೇರಿದಂತೆ ದೆಹಲಿ, ಮದ್ರಾಸು, ಬೆಂಗಳೂರು, ನಾಗ್ಪುರ, ಪಾಟ್ನಾ ಮತ್ತು ಕಾನ್ಪುರ. (ಆ) ಸರ್ಕಾರಿ ಖಜಾನೆ ಇರುವ ಅಥವಾ ರೈಲ್ವೆ ಸಂಗಮಸ್ಥಳವಾಗಿರುವ, ಅಥವಾ ಇತ್ತೀಚಿನ ಜನಗಣತಿಯಲ್ಲಿ ಒಂದು ಲಕ್ಷಕ್ಕೆ ಕಮ್ಮಿ ಇಲ್ಲದ ಜನಸಂಖ್ಯೆ ಇರುವ ಪ್ರದೇಶ. ಹೀಗೆ 1970 ರಿಂದೀಚೆಗೆ ಹೆಚ್ಚು ಚಲಾರ್ಥ ಕೋಠಿಗಳನ್ನು ತೆರೆಯಲು ರಿಸರ್ವ್ ಬ್ಯಾಂಕಿಗೆ ಅವಕಾಶ ದೊರೆಯಿತು.

## ಸ್ವರೂಪ

ಇನ್ನು ಚಲಾರ್ಥ ಕೋಠಿಯನ್ನು ಪರಿಶೀಲಿಸೋಣ.

ಚಲಾರ್ಥ ಕೋಠಿಯು ಬ್ಯಾಂಕಿನಲ್ಲಿ ಅಥವಾ ಸರ್ಕಾರಿ ಖಜಾನೆಯಲ್ಲಿ ರಿಸರ್ವ್ ಬ್ಯಾಂಕಿನ ಹಣವನ್ನಿಡುವ ಜಾಗ. ಆದುದರಿಂದ ಇದರ ಸುರಕ್ಷಿತತೆಗೆ, ಭದ್ರತೆಗೆ ಹೆಚ್ಚಿನ ಗಮನ ನೀಡುವುದು ಅಗತ್ಯ. ಸಿಮೆಂಟ್ ಕಾಂಕ್ರೀಟಿನಿಂದ ಕಟ್ಟಿರುವ ಗೋಡೆಗಳು, ನೀರು ಬೆಂಕಿಗಳಿಂದ ನೋಟುಗಳು ನಷ್ಟವಾಗದಂತಹ ವ್ಯವಸ್ಥೆ, ತೆರೆಯಲು ಎರಡು ಬೀಗದ ಕೈಗಳನ್ನು ಉಪಯೋಗಿಸಬೇಕಾದ ಬಾಗಿಲುಗಳು, ಉಕ್ಕಿನ ಕಪಾಟುಗಳು ಇವೆಲ್ಲ ಚಲಾರ್ಥ ಕೋಠಿಯನ್ನು ನಿರ್ಮಿಸುವಾಗ ಅತ್ಯಗತ್ಯವಾಗಿ ಬೇಕಾಗುವಂತಹವುಗಳು. ಕೋಠಿಯಲ್ಲಿ ಕೆಲವು ಉಕ್ಕಿನ ಕಪಾಟುಗಳಿಗಾದರೂ ಮೂರು ಜನ ಬೀಗ ಹಾಕಬಹುದಾದಂತಹ ವ್ಯವಸ್ಥೆಯ ಆವಶ್ಯಕತೆ ಇರುತ್ತದೆ. ಒಂದು ಬ್ಯಾಂಕಿಗೆ ಚಲಾರ್ಥ ಕೋಠಿಯನ್ನು ರಿಸರ್ವ್ ಬ್ಯಾಂಕು ಮಂಜೂರು ಮಾಡಬೇಕಾದರೆ, ಈ ಮುಂಚೆ ತಿಳಿಸಿದ ಎಲ್ಲ ವ್ಯವಸ್ಥೆಗಳೂ ಸಮರ್ಪಕವಾಗಿ ಸಿದ್ಧವಾಗಿವೆ

ಎಂಬುದರ ಬಗ್ಗೆ ಪ್ರಮಾಣಿನ ಪತ್ರವನ್ನು ಸಂಬಂಧಿಸಿದ ಬ್ಯಾಂಕಿನಿಂದ ರಿಸರ್ವ್ ಬ್ಯಾಂಕು ಅಪೇಕ್ಷಿಸುತ್ತದೆ. ಪ್ರಮಾಣಿನ ಪತ್ರವನ್ನು ಪರಿಶೀಲಿಸಿದ ಅನಂತರ ರಿಸರ್ವ್ ಬ್ಯಾಂಕು ನಗದು ಕೋಠಿಯನ್ನು ಮಂಜೂರು ಮಾಡಿ ಮೊದಲ ಬಾರಿಯ ನಗದು (ಹಣ) ರವಾನೆಗೆ ಏರ್ಪಾಡು ಮಾಡುತ್ತದೆ. ಇದನ್ನು ರಿಸರ್ವ್ ಬ್ಯಾಂಕಿನ ಕರೆನ್ಸಿ ಅಧಿಕಾರಿಗಳು ಸಂಬಂಧಿಸಿದ ಬ್ಯಾಂಕಿನ ನಗದು ಹಣದ ಅಗತ್ಯದ ವಿವಿಧ ವಿವರಗಳನ್ನು [ಉದಾ : ಯಾವ ಮೌಲ್ಯದ ನೋಟುಗಳು ? ಎಷ್ಟು ?] ಆ ಬ್ಯಾಂಕಿನ ಅಧಿಕಾರಿಗಳೊಂದಿಗೆ ಸಮಾಲೋಚಿಸಿ ತಿಳಿದುಕೊಳ್ಳುತ್ತಾರೆ. ಅಲ್ಲಿಂದಾಚೆಗೆ ಇಂತಹ ರವಾನೆಗಳು ರಿಸರ್ವ್ ಬ್ಯಾಂಕು ಬೇರೆ ರೀತಿ ನಿರ್ಧರಿಸದಿದ್ದಲ್ಲಿ ಅರ್ಧವಾರ್ಷಿಕ ಅಂತರಗಳಲ್ಲಿರುತ್ತವೆ.

ರಿಸರ್ವ್ ಬ್ಯಾಂಕು ನಗದು ಹಣ ರವಾನೆಯಷ್ಟೇ ಅಲ್ಲದೆ ಚಲಾವಣೆಯಿಂದ ಹಳತಾದ, ಪುನಃ ಚಲಾವಣೆಗೆ ಅಯೋಗ್ಯ ಎನಿಸಿದ ನೋಟುಗಳನ್ನು (ಇವು ಸಾಮಾನ್ಯವಾಗಿ ಸಾರ್ವಜನಿಕರಿಂದ ಕರೆನ್ಸಿ ಕೋಠಿಗಳಲ್ಲಿ ಸಂಚಯಿತವಾಗುತ್ತವೆ) ಕೋಠಿಗಳಿಂದ ತರಿಸಿಕೊಂಡು ಅವನ್ನು ನಾಶಮಾಡುತ್ತದೆ. ಚಲಾರ್ಥ ಕೋಠಿಗಳಿಲ್ಲದ ಇತರ ಬ್ಯಾಂಕುಗಳು ಕೂಡ ತಮ್ಮಲ್ಲಿ ಸಂಚಯಿತವಾದ ಹಳೆಯ ನೋಟುಗಳನ್ನು ಸಮೀಪದ ಚಲಾರ್ಥ ಕೋಠಿಗೆ ತಲುಪಿಸಿ ತಮ್ಮ ಖಾತೆಗೆ ಜಮಾ ಪಡೆಯುತ್ತಾರೆ. ಹೀಗೆ ಸಂಗ್ರಹವಾದ ಕರೆನ್ಸಿ ನೋಟುಗಳ ಹಾಗೂ ತಾವು ರಿಸರ್ವ್ ಬ್ಯಾಂಕಿನಿಂದ ಪಡೆಯ ಬಯಸುವ ನೋಟುಗಳ ವಿವರಗಳನ್ನು ಚಲಾರ್ಥ ಕೋಠಿಯ ಅಧಿಕಾರಿಗಳು ರಿಸರ್ವ್ ಬ್ಯಾಂಕಿಗೆ ಒದಗಿಸಿದರೆ, ರಿಸರ್ವ್ ಬ್ಯಾಂಕು ಹಳೆಯ ನೋಟುಗಳನ್ನು ಹಿಂಪಡೆಯಲು ಹಾಗೂ ಹೊಸ ನೋಟುಗಳನ್ನು ರವಾನಿಸಲು ವ್ಯವಸ್ಥೆ ಮಾಡುತ್ತದೆ. ಎಲ್ಲ ಹಣ ರವಾನೆಗಳೂ ಶಸ್ತ್ರಸಜ್ಜಿತ ಪೋಲೀಸು ಕಾವಲಿನಲ್ಲಿಯೇ ಜರುಗಬೇಕು. ಎಲ್ಲಿಂದ ಹಣ ರವಾನೆಯಾಗುತ್ತಿದೆಯೋ ಆ ಬ್ಯಾಂಕಿನ ಪ್ರತಿನಿಧಿಯೊಬ್ಬ ಅದರ ಜತೆಗಿರಬೇಕು. ಅದು ಗಮ್ಯಸ್ಥಾನವನ್ನು ಸೇರಿ, ಒಳಗಿರುವ ಹಣ ಸರಿಯಾಗಿದೆ ಎಂದು ಪ್ರಮಾಣೀಕರಿಸುವವರೆಗೆ ಪ್ರತಿನಿಧಿ ಹಣದ ಗುಣಕ್ಕೆ ಹಾಗೂ ಮೌಲ್ಯಕ್ಕೆ ಜವಾಬ್ದಾರನಾಗಿರುತ್ತಾನೆ. ಪೋಲೀಸು ಕಾವಲು ಪಡೆ ಹಣವಿರಿಸಿರುವ ಪೆಟ್ಟಿಗೆಗಳನ್ನು ಮಾತ್ರ ರಕ್ಷಿಸುತ್ತದೆ.

ಕರೆನ್ಸಿ ಕೋಠಿಗಳು ಇರುವ ಕೋಣೆಯ ಗೋಡೆ, ನೆಲ, ಮಾಡು ಹಾಗೂ ಒಟ್ಟು ಗಾತ್ರಗಳಿಗೆ ಸಂಬಂಧಿಸಿದಂತೆ 'ಎ', 'ಬಿ', ಮತ್ತು 'ಸಿ'ಗಳೆಂದು ಅವು ಮೂರು ವಿಧವಾಗಿ ವರ್ಗೀಕರಿಸಲ್ಪಟ್ಟಿವೆ.

### ತಪಾಸಣೆ

ಸಾಮಾನ್ಯವಾಗಿ ಆಯಾ ಬ್ಯಾಂಕಿನ ಕೇಂದ್ರ, ಪ್ರಧಾನ ಕಛೇರಿಗಳವರು ತಮ್ಮಲ್ಲಿರುವ ಚಲಾರ್ಥ ಕೋಠಿಗಳ ತಪಾಸಣೆಗಾಗಿ ತಮ್ಮ ಅಧಿಕಾರಿಗಳನ್ನು ಅಧಿಕೃತವಾಗಿ ಕಳಿಸುವ ಏರ್ಪಾಡು ಮಾಡಬೇಕಾಗುತ್ತದೆ. ತಪಾಸಕರು ಚಲಾರ್ಥ ಕೋಠಿಯನ್ನು ವಿವರವಾಗಿ ತಪಾಸಿಸಿ ಅದರ ಬಗೆಗೆ ಪ್ರಮಾಣಿನವೊಂದನ್ನು ಕೇಂದ್ರ ಕಛೇರಿ ಹಾಗೂ ರಿಸರ್ವ್ ಬ್ಯಾಂಕಿನ ಕರೆನ್ಸಿ ಅಧಿಕಾರಿಗಳಿಗೆ ಕಳಿಸಬೇಕಾಗಿರುತ್ತದೆ. ಚಲಾರ್ಥ ಕೋಠಿಯಲ್ಲಿ ಹೆಚ್ಚು ಮೌಲ್ಯದ ಹಣವಿದ್ದಲ್ಲಿ, ಅನುಕೂಲ ದೃಷ್ಟಿಯಿಂದ ತಪಾಸಿಗರು ನೂರು ರೂ. ಮೌಲ್ಯದ ನೋಟುಗಳನ್ನು ಪೂರ್ಣವಾಗಿಯೂ, ಉಳಿದವನ್ನು ಶೇಕಡಾ ಇಷ್ಟು (ಉದಾ : 5%) ಎಂಬಂತೆಯೂ ಎಣಿಸುತ್ತಾರೆ. ಇಂತಹ ತಪಾಸಣೆಯಲ್ಲಿ ಯಾವ ಕೊರತೆ ಕಂಡುಬಂದರೂ ಬ್ಯಾಂಕು ಅದನ್ನು ತುಂಬಿಕೊಟ್ಟು, ರಿಸರ್ವ್ ಬ್ಯಾಂಕಿನ ಕರೆನ್ಸಿ ಅಧಿಕಾರಿಗೆ ತಿಳಿಸಬೇಕಾಗುತ್ತದೆ. ಭಾರತೀಯ ರಿಸರ್ವ್ ಬ್ಯಾಂಕು ಕೂಡ ಅವಶ್ಯಕವೆನಿಸಿದಲ್ಲಿ ತನ್ನ ಅಧಿಕಾರಿಗಳನ್ನು ಕರೆನ್ಸಿ ಕೋಠಿಗಳ ತಪಾಸಣೆಗೆ ಕಳಿಸಬಹುದು. ಕರೆನ್ಸಿ ಕೋಠಿಯ ಅಧಿಕಾರಿಗಳ ಬದಲಾವಣೆಗಳು ಜರುಗಿದಾಗ, ಅಧಿಕಾರ ವಹಿಸಿಕೊಳ್ಳುವವನು ಎಲ್ಲವೂ ಎಲ್ಲ ರೀತಿಯಲ್ಲಿಯೂ ಸಮರ್ಪಕವಾಗಿದೆ ಎಂದು ಪ್ರಮಾಣಿನ ಪತ್ರವನ್ನು ನೀಡಬೇಕು.

### ಅನುಕೂಲಗಳು

ಚಲಾರ್ಥ ಕೋಠಿಯನ್ನು ಹೊಂದುವುದರಿಂದ ಬ್ಯಾಂಕಿಗೆ ಅನೇಕ ಅನುಕೂಲಗಳುಂಟು. ಚಲಾರ್ಥ ಕೋಠಿಗೆ ಸಂಬಂಧಿಸಿದಂತೆ ಬ್ಯಾಂಕು ಹಾಗೂ ರಿಸರ್ವ್ ಬ್ಯಾಂಕುಗಳ ಸಂಬಂಧ, ಭಾರತೀಯ ಕರಾರು ಅಧಿನಿಯಮದ ಪ್ರಕಾರ ಜಮಾನತುದಾರ ಹಾಗೂ ಜಮಾನತುಗಾರರ ರೀತಿ ಇರುತ್ತದೆ.

ಸದ್ಯದ ವ್ಯವಸ್ಥೆಯಲ್ಲಿ, ರಾಷ್ಟ್ರೀಕೃತ ಬ್ಯಾಂಕಿನ ಶಾಖೆಯಲ್ಲಿ ಸಂಚಯವಾಗುವ ಹೆಚ್ಚಿನ ನಿಧಿಗಳನ್ನು ಆ ಬ್ಯಾಂಕುಗಳು ಭಾರತೀಯ ರಿಸರ್ವ್ ಬ್ಯಾಂಕು ಅಥವಾ ಭಾರತೀಯ ಸ್ಟೇಟ್ ಬ್ಯಾಂಕು ಅಥವಾ ಅದರ ಸಹವರ್ತಿ ಬ್ಯಾಂಕುಗಳಲ್ಲಿನ ತಮ್ಮ ಪ್ರಧಾನ ಖಾತೆಗೆ ಜಮೆ ಮಾಡುತ್ತವೆ. ರಾಷ್ಟ್ರೀಕೃತ ಬ್ಯಾಂಕುಗಳು ಈ ನಿಧಿಗಳನ್ನು ತತ್‌ಕ್ಷಣ ರವಾನಿಸಲು ಅವಕಾಶವಿಲ್ಲದಿದ್ದಲ್ಲಿ ಹೆಚ್ಚಿನ ಹಣ ಜಡವಾಗಿ, ಬಡ್ಡಿ ನಷ್ಟವಾಗುತ್ತದೆ. ಈಗೀಗ ಹರಿದು ಬರುತ್ತಿರುವ ಹೆಚ್ಚಿನ ಹಣದ ಹೊಳೆಯನ್ನು ರಿಸರ್ವ್ ಬ್ಯಾಂಕು ಹಾಗೂ ಭಾರತೀಯ ಸ್ಟೇಟ್ ಬ್ಯಾಂಕುಗಳು ತಡೆಯಲಾರದೆ ಇತರ ರಾಷ್ಟ್ರೀಕೃತ ಬ್ಯಾಂಕುಗಳಿಗೂ ಕರೆನ್ಸಿ ಕೋಠಿಯನ್ನು ಕೊಡಬೇಕಾದಂತಹ ಪರಿಸ್ಥಿತಿ ಉದ್ಭವವಾಗಿದೆ. ಇದರಿಂದ ಆಯಾ ಬ್ಯಾಂಕುಗಳಿಗೂ ಅನುಕೂಲ. ಕರೆನ್ಸಿ ಕೋಠಿಗೆ ಹಣ ಜಮ ಮಾಡಿದ ತತ್‌ಕ್ಷಣ ಧನಿಕೆ ದೊರೆತು ಬೇಕಾದಾಗ ಹಿಂಪಡೆಯಬಹುದಾಗಿರುತ್ತದೆ. ಅಲ್ಲದೆ ರಿಸರ್ವ್ ಬ್ಯಾಂಕು, ಭಾರತೀಯ ಸ್ಟೇಟ್ ಬ್ಯಾಂಕ್‌ಗಳ ಮೇಲಣ ಅವಲಂಬನೆ ಕಡಿಮೆಯಾಗುತ್ತದೆ. ಕರೆನ್ಸಿ ಕೋಠಿ ತಮ್ಮಲ್ಲಿಯೇ ಇರುವುದರಿಂದ ಹಣವನ್ನು ಜಮೆ ಮಾಡಲೋಸುಗ ಭೌತಿಕವಾಗಿ ಹೊರಗೆ ಒಯ್ಯುವುದು ತಪ್ಪಿ ಆ ಮಟ್ಟಿಗೆ ನಷ್ಟಸಂಭವ ತಪ್ಪುತ್ತದೆ.

ಅಲ್ಲದೆ, ನಗದು ಮೀಸಲು ಅನುಪಾತದ ಮಿತಿಯೊಳಗಿನ, ಬ್ಯಾಂಕೊಂದರ, ಚಲಾರ್ಥ ಕೋಠಿಗಳಲ್ಲಿನ ಹಣಕ್ಕೆ ರಿಸರ್ವ್ ಬ್ಯಾಂಕು ಬಡ್ಡಿಯನ್ನು ಕೊಡಬೇಕಾಗುತ್ತದೆ.

ಸರ್ಕಾರಿ ಇಲಾಖೆಗಳು, ಬ್ಯಾಂಕುಗಳು ಹಾಗೂ ಸಾರ್ವಜನಿಕರ ಹಣ ರವಾನೆಯನ್ನು ಸಾಧ್ಯಗೊಳಿಸುವುದರ ಮೂಲಕ ಚಲಾರ್ಥ ಕೋಠಿಗಳು ಇಂತಹದೊಂದು ಮೂಲ ಆಶಯವನ್ನು ಸಾಧ್ಯಗೊಳಿಸುತ್ತವೆ.

ಬ್ಯಾಂಕಿನ ಆಡಳಿತ ವರ್ಗಕ್ಕೆ ಕನಿಷ್ಠ ನಗದನ್ನು ಮಾತ್ರ ಬ್ಯಾಂಕಿನ ಲೆಕ್ಕದಲ್ಲಿ ಉಳಿಸಿಕೊಳ್ಳಲು ಚಲಾರ್ಥ ಕೋಠಿಗಳು ಸಹಾಯ ಮಾಡುತ್ತವೆ.

ಸಾರ್ವಜನಿಕರ ನೋಟುಗಳ ಅಗತ್ಯಗಳಿಗೂ, ರಿಸರ್ವ್ ಬ್ಯಾಂಕಿಗೂ ನಡುವಣ ಮಾಧ್ಯಮವಾಗಿ ಚಲಾರ್ಥ ಕೋಠಿಗಳು ಕಾರ್ಯನಿರ್ವಹಿಸುತ್ತವೆ. ಇದರಿಂದ ಕರೆನ್ಸಿ ಕೋಠಿಗಳಿರುವ ಬ್ಯಾಂಕುಗಳು ತಮ್ಮ ಗ್ರಾಹಕರಿಗೆ ಕೊನೆಯ ಪಕ್ಷ ನೋಟುಗಳ ಆವಶ್ಯಕತೆಯ ಮಟ್ಟಿಗಾದರೂ ಉತ್ತಮ ಸೇವೆ ಸಲ್ಲಿಸಬಹುದು.

## ಕಾರ್ಯವಿಧಾನ

ಬ್ಯಾಂಕಿಗೆ ಬರುವ ಎಲ್ಲ ನೋಟುಗಳನ್ನು ಹಳೆಯ ಹಾಗೂ ಪುನಃ ಚಲಾವಣೆಗೆ ಕಳಿಸಬಹುದಾದ ನೋಟುಗಳಾಗಿ ವಿಂಗಡಿಸಲಾಗುತ್ತದೆ. ವಿಂಗಡಿಸಿ ಅವನ್ನು ನೂರರ ಕಟ್ಟುಗಳನ್ನು ಮಾಡಿ ಚಲಾರ್ಥ ಕೋಠಿಗೆ ಜಮೆ ಮಾಡಲಾಗುತ್ತದೆ.

ಚಲಾರ್ಥ ಕೋಠಿಯಿಂದ ಹಣದ ಋಣಿಕೆಯಾಗಲಿ ಅದಕ್ಕೆ ಧನಿಕೆಯಾಗಲಿ ಕನಿಷ್ಠ ಸಾವಿರ ರೂ.ಗಳಿದ್ದು ಐನೂರರ ಅಪವರ್ತನದಲ್ಲಿರಬೇಕು.

ಕೆಲವು ವೇಳೆ ಚಲಾರ್ಥ ಕೋಠಿಯಲ್ಲಿ ಚಲಾವಣೆಯಲ್ಲಿ ಇಲ್ಲದಿರುವ ಹಣವೂ ಇರುವುದುಂಟು. ಉದಾ: ರಾಮರಾವ್ ಸಹಿಮಾಡಿರುವ ನೂರು ರೂ. ನೋಟುಗಳು. ಇವುಗಳನ್ನು ಚಲಾರ್ಥ ಕೋಠಿಗೆ ಜಮೆ ಮಾಡಬಹುದು. ಆದರೆ ಅಲ್ಲಿಂದ ಪುನಃ ಹೊರತೆಗೆದು ಚಲಾವಣೆಗೆ ಕಳಿಸುವುದು ಸಲ್ಲದು.

ಈಚೀಚೆಗೆ ಚಲಾರ್ಥ ಕೋಠಿಗಳಿಗೆ ಹರಿದ ನೋಟುಗಳನ್ನು ಜಮಾ ಮಾಡಬಹುದಾದ (ಬದಲಾಯಿಸುವ) ಸವಲತ್ತನ್ನೂ ರಿಸರ್ವ್ ಬ್ಯಾಂಕು ನೀಡಿದೆ. ಸಂಬಂಧಿಸಿದ ಬ್ಯಾಂಕಿನ ವ್ಯವಸ್ಥಾಪಕರು ರಿಸರ್ವ್ ಬ್ಯಾಂಕಿನ ನಿರ್ದೇಶನಕ್ಕನುಗುಣವಾಗಿ ಹರಿದ ನೋಟುಗಳನ್ನು ಸಾರ್ವಜನಿಕರಿಂದ ಸ್ವೀಕರಿಸಿ ಬದಲಾಯಿಸಿಕೊಡಬಹುದಾಗಿದೆ. ಇದು ಗ್ರಾಮಾಂತರ ಪ್ರದೇಶದ ಜನರಿಗಂತೂ ಬಹಳ ಅನುಕೂಲವಾದ ಅಂಶವಾಗಿದೆ. ಇದರಿಂದ ಅವರು ತಮ್ಮಲ್ಲಿರುವ ಹಳೆಯ ನೋಟುಗಳನ್ನು ಬದಲಾಯಿಸಿಕೊಳ್ಳಲು ನಗರ ಪ್ರದೇಶಗಳಿಗೆ ಹೋಗುವುದು ತಪ್ಪಿದಂತಾಗಿದೆ.

## ಸಣ್ಣ ನಾಣ್ಯಗಳ ಡಿಪೋ

ಚಲಾರ್ಥ ಕೋಠಿಗಳಿಗೆ ಪೂರಕವಾಗಿ ಬ್ಯಾಂಕುಗಳಲ್ಲಿ ಸಣ್ಣ ನಾಣ್ಯಗಳ ಡಿಪೋ ಕಾರ್ಯ ನಿರ್ವಹಿಸುತ್ತಿದೆ. ರಿಸರ್ವ್ ಬ್ಯಾಂಕು ಭಾರತ ಸರ್ಕಾರದ ಪರವಾಗಿ ಸಣ್ಣ ನಾಣ್ಯಗಳ ಡಿಪೋವಿನ ಕಾರ್ಯಭಾರವನ್ನೂ ಇತ್ತೀಚೆಗೆ ತಾನೇ ವಹಿಸಿಕೊಂಡಿದೆ. (ಇದಕ್ಕೆ ಮುಂಚೆ ಅದು ಭಾರತ ಸರ್ಕಾರದ ಮಿಂಟ್‌ನವರಿಂದ). ಇದು ಸಾರ್ವಜನಿಕರ ಚಿಲ್ಲರೆ ನಾಣ್ಯಗಳ ಅಗತ್ಯವನ್ನು ಪೂರೈಸುತ್ತದೆ. ಐವತ್ತು ಪೈಸೆಯ ಹಾಗೂ ಅದಕ್ಕೂ ಕಡಿಮೆ ಮೌಲ್ಯದ ಎಲ್ಲ ನಾಣ್ಯಗಳೂ ಸಣ್ಣ ನಾಣ್ಯಗಳ ಡಿಪೋವಿನ ವ್ಯಾಪ್ತಿಗೆ ಬರುತ್ತವೆ. ಕರೆನ್ಸಿ ಕೋಠಿಯಿರುವ ಕೋಣೆಯಲ್ಲಿಯೇ, ಆದರೆ ಕರೆನ್ಸಿ ನೋಟುಗಳಿಡುವ ಸ್ಥಳದಿಂದ ಪ್ರತ್ಯೇಕಿಸಲ್ಪಟ್ಟ ಜಾಗದಲ್ಲಿ, ಸಣ್ಣ ನಾಣ್ಯಗಳನ್ನಿಡಲಾಗುತ್ತದೆ.

## ರಕ್ಷಣೆ

ಚಲಾರ್ಥ ಕೋಠಿಯನ್ನು ಸುರಕ್ಷಿತವಾಗಿರಿಸಿಕೊಳ್ಳಬೇಕಾದ ಆವಶ್ಯಕತೆಯನ್ನು ಒತ್ತಿ ಹೇಳುವ ಅಗತ್ಯ ಇಲ್ಲ. ಅದರ ಸಮೀಪದಲ್ಲಿಯೇ ಅಗ್ನಿಶಾಮಕ ವಸ್ತುಗಳನ್ನು ಯಾವ ಕ್ಷಣದಲ್ಲಿಯಾದರೂ ಉಪಯೋಗಕ್ಕೆ ಬರುವಂತೆ ಸಜ್ಜುಗೊಳಿಸಿರಬೇಕು. ಕೋಠಿಯೊಳಗೆ ಗೆದ್ದಲು ಮುಂತಾದವು ಹತ್ತದಂತೆ ಆಗಾಗ ಕ್ರಿಮಿನಾಶಕಗಳನ್ನು ಸಿಂಪಡಿಸುತ್ತಿರಬೇಕು. ತೇವ ಹತ್ತದಂತೆ ನೋಡಿಕೊಳ್ಳಬೇಕು.

ಸದಾ ಶಸ್ತ್ರಸಜ್ಜಿತ ಕಾವಲುಗಾರರು ಕೋಠಿಯನ್ನು ಪಹರೆ ಮಾಡುವ ವ್ಯವಸ್ಥೆ ಇರಬೇಕು. ಅಲ್ಲದೆ ಪೋಲಿಸ್ ಸಿಬ್ಬಂದಿ ಕೂಡ ಪಹರೆ ಕೊಡುವ ವ್ಯವಸ್ಥೆ ಇದ್ದರೆ ಒಳ್ಳೆಯದು.

1980ರ ಅಂತ್ಯದ ವೇಳೆಗೆ ಲಭ್ಯವಾದ ಅಂಕಿ-ಅಂಶದ ಪ್ರಕಾರ ಭಾರತದಲ್ಲಿ ಸುಮಾರು ನಾಲ್ಕು ಸಾವಿರ ಕರೆನ್ಸಿ ಕೋಠಿಗಳು ಕಾರ್ಯಪ್ರವೃತ್ತವಾಗಿವೆ.

1983ರ ಏಪ್ರಿಲ್‌ನಲ್ಲಿ, ಪತ್ರಿಕೆಯೊಂದು ಪ್ರಕಟಿಸಿದಂತೆ, ಭಾರತದಲ್ಲಿ ಚಲಾವಣೆಯಲ್ಲಿರುವ ಒಟ್ಟು ಹಣ ಈ ರೀತಿ ಇದೆ :

ರಿಸರ್ವ್ ಬ್ಯಾಂಕು ನೋಟುಗಳು. ರೂ. 17,971. 34 ಕೋಟಿ. ಒಂದು ರೂ. ನೋಟು ಹಾಗೂ ನಾಣ್ಯಗಳು : ರೂ. 24.94 ಕೋಟಿ. ಬ್ಯಾಂಕಿಂಗ್ ಇಲಾಖೆಯಲ್ಲಿ : ರೂ. 48.09 ಕೋಟಿ. ಭಾರತದಂಥ ಬೃಹತ್ ದೇಶದಲ್ಲಿ ದಿನೇದಿನೇ ಬೆಳೆಯುತ್ತಿರುವ ನಗದು ಹಣದ ಅಗತ್ಯಗಳನ್ನು ಚಲಾರ್ಥ ಕೋಠಿಗಳು ಪೂರೈಸಬೇಕಾಗಿದೆ. ಈ ನಿಟ್ಟಿನಲ್ಲಿ ಕೆಲವು ಅಂಶಗಳನ್ನು ಗಮನಿಸಿದರೆ ಒಳ್ಳೆಯದು ಎನಿಸುತ್ತದೆ :

1 ಕೈಗಾರಿಕೀಕರಣ, ಹಸಿರು ಕ್ರಾಂತಿ ಮುಂತಾದುವುಗಳಿಂದ ನೋಟುಗಳ ಚಲಾವಣೆಯಲ್ಲಿ ಆಗಿರುವ ಆಧಿಕ್ಯದಿಂದ ಚಲಾರ್ಥ ಕೋಠಿಗಳ ಜವಾಬ್ದಾರಿಯೂ ಅದೇ ಗಾತ್ರದಲ್ಲಿ ಹಿಗ್ಗಿದೆ. ಈ ಪರಿಸ್ಥಿತಿಯಲ್ಲಿ ಚಲಾರ್ಥ ಕೋಠಿಗಳ ತುರ್ತು ಸಮಸ್ಯೆ ಎಂದರೆ ಸ್ಥಳದ ತೀವ್ರ ಕೊರತೆ ಹಾಗೂ ಹೊಸ ನೋಟುಗಳ ಅಸಾಧಾರಣ ಅಭಾವ. ಬ್ಯಾಂಕುಗಳ ಸ್ಥಳಾವಕಾಶಗಳನ್ನು ಬಗ್ಗಿಸಿಕೊಂಡು ರಿಸರ್ವ್ ಬ್ಯಾಂಕು ನೋಟುಗಳ ಪೂರೈಕೆಯನ್ನು ಉತ್ತಮಗೊಳಿಸಬೇಕು.

2 ಹಳೆಯ ಮತ್ತು ಹರಿದ ನೋಟುಗಳನ್ನು ಹಿಂಪಡೆಯಲು ಹಾಗೂ ಅವನ್ನು ನಾಶಮಾಡಲು ರಿಸರ್ವ್ ಬ್ಯಾಂಕು ಕನಿಷ್ಠ ಜಿಲ್ಲೆಗೊಂದರಂತೆ ತನ್ನ ಪ್ರಾತಿನಿಧಿಕ ಕಛೇರಿಯನ್ನು ತೆರೆಯಬೇಕು. ಇದು ಚಲಾರ್ಥ ಕೋಠಿಗಳ ಬವಣೆಯನ್ನು ಬಹುಮಟ್ಟಿಗೆ ಕಡಿಮೆ ಮಾಡಬಲ್ಲದು.

3 ಹಳೆಯ ಮತ್ತು ಚಲಾವಣಾಯೋಗ್ಯ ವಿಂಗಡಣೆ ಬಗೆಗೆ ಬ್ಯಾಂಕಿನ ಸಿಬ್ಬಂದಿವರ್ಗಕ್ಕೆ ಯುಕ್ತ ತರಬೇತಿಯನ್ನು ನೀಡಬೇಕು.

4 ಚಲಾರ್ಥ ಕೋಠಿಗಳನ್ನು ಇನ್ನೂ ಹೆಚ್ಚು ಸಂಖ್ಯೆಯಲ್ಲಿ ತೆರೆಯಬೇಕು. ಇವೆಲ್ಲ ಸಾಧ್ಯವಾದಾಗ, ಚಲಾರ್ಥ ಕೋಠಿಗಳು ನಿಜಕ್ಕೂ ಸಾರ್ವಜನಿಕರಿಗೆ ಹೆಚ್ಚು ಉಪಯುಕ್ತವೆನಿಸಿ, ರಿಸರ್ವ್ ಬ್ಯಾಂಕಿನ ಕರೆನ್ಸಿ ವ್ಯವಸ್ಥಾಪನ ಕಾರ್ಯದಲ್ಲಿ ಯಶಸ್ವಿಯಾಗಿ ಪಾಲ್ಗೊಳ್ಳಬಹುದು ಎನಿಸುತ್ತದೆ.

---

## ಚಲಾರ್ಥ ಕೋಠಿಯ ಸಮಸ್ಯೆಗಳು

ಚಲಾರ್ಥ ಕೋಠಿಗಳಿಗೆ ಸಂಬಂಧಿಸಿದಂತೆ ಉದ್ಭವಿಸಿರುವ ಸ್ಥಳಾಭಾವ, ಸಿಬ್ಬಂದಿಯ ಕೊರತೆ, ನಿರ್ವಹಣೆಯ ವೆಚ್ಚ, ನೋಟುಗಳ ವಿಂಗಡಣೆ ಮುಂತಾದ ಸಮಸ್ಯೆಗಳಿಗೆ ಮೂಲ ಕಾರಣವೆಂದರೆ ನೋಟು ಚಲಾವಣೆಯೇ. ಭಾರತದಲ್ಲಿ ಮುಗ್ಧ ಹಳ್ಳಿಗರ ಹಾಗೂ ಅನಕ್ಷರಸ್ಥರ ಸಂಖ್ಯೆಯೇ ಹೆಚ್ಚು. ನೋಟುಗಳನ್ನಿಟ್ಟುಕೊಳ್ಳುವುದು ಹೇಗೆಂಬುದರ ಅರಿವು ಇವರಿಗಿಲ್ಲ. ಅವನ್ನು ರಕ್ಷಿಸುವ ಸೌಲಭ್ಯಗಳೂ ಇಲ್ಲ. ಆದ್ದರಿಂದ ನೋಟುಗಳು ಅವನ್ನು ನೀಡಿದ ಒಂದು ವರ್ಷದೊಳಗೆ ಚಲಾವಣೆಗೆ ಅನರ್ಹವಾಗುತ್ತವೆ. ಹಳೆಯ ಹಾಗೂ ಹೊಸ ನೋಟುಗಳ ವಿಂಗಡಣೆ, ನಗದಿನ ಶೇಖರಣೆ, ಕೆಲಸಗಾರರಿಗೆ ವೇಳಾತೀತ ಭತ್ಯ ಮುಂತಾದ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ನೋಟು ಮುದ್ರಣಕ್ಕೆ ಅಗತ್ಯವಾದ ಕಾಗದದ ವೆಚ್ಚವೂ ದುಬಾರಿಯಾಗುತ್ತಿದೆ. ಚಲಾವಣೆಗೆ ನೀಡುತ್ತಿರುವ ನೋಟುಗಳ ಮೊತ್ತಕ್ಕೆ ಅನುಗುಣವಾಗಿ ಚಲಾರ್ಥ ಕೋಠಿಗಳ ಸ್ಥಾಪನೆ ಸಾಧ್ಯವಾಗುತ್ತಿಲ್ಲ. ಈ ಸಮಸ್ಯೆಗಳ ಪರಿಹಾರಕ್ಕೆ ಅಧಿಕ ಮೌಲ್ಯಗಳ ನಾಣ್ಯಗಳ ಟಂಕನ ಒಂದು ಉಪಾಯ. ಇವು ಕನಿಷ್ಠ ಹದಿನೈದು ವರ್ಷ ಚಲಾವಣೆಯಲ್ಲಿರಬಹುದು. ಇವರಿಂದ ವಿಂಗಡಣೆಯ ಸಮಸ್ಯೆ ಕಡಿಮೆಯಾಗುತ್ತದೆ. ಚೆಕ್ ಪದ್ಧತಿಯನ್ನು ಹೆಚ್ಚು ಜನಪ್ರಿಯಗೊಳಿಸುವುದರಿಂದ ಚಲಾರ್ಥ ಕೋಠಿಗಳ ಸ್ಥಳಾಭಾವದ ಸಮಸ್ಯೆ ಬಹುಮಟ್ಟಿಗೆ ಪರಿಹಾರವಾಗುತ್ತದೆ.

# ಸಹಭಾಗಿತ್ವ ಬ್ಯಾಂಕಿಂಗ್*

ಬಿ. ಎಸ್. ಚಂದ್ರಶೇಖರ

ಕೈಗಾರಿಕೆಗೆ ಬ್ಯಾಂಕುಗಳು ಅಧಿಕ ಪ್ರಮಾಣದಲ್ಲಿ ಸಾಲ ನೀಡುತ್ತಿದ್ದರೂ ದೊಡ್ಡ ಗಾತ್ರದ ಕೈಗಾರಿಕಾಘಟಕಗಳ ಉದರಿ ಬೇಡಿಕೆಯನ್ನು ಪೂರೈಸುವಲ್ಲಿ ಬ್ಯಾಂಕುಗಳಲ್ಲಿ ಒಂದು ಜಟಿಲ ಸಮಸ್ಯೆ ಎದುರಾಗುತ್ತದೆ. ಒಂದೇ ಕೈಗಾರಿಕಾ ಘಟಕದಲ್ಲಿ ದೊಡ್ಡ ಮೊತ್ತವನ್ನು ವಿನಿಯೋಜಿಸುವುದರಿಂದ ನಷ್ಟಸಂಭವ (ರಿಸ್ಕ್) ಹೆಚ್ಚು ಎನ್ನುವುದೇ ಆ ಸಮಸ್ಯೆ. 'ಎಲ್ಲ ತತ್ತಿಗಳನ್ನೂ ಒಂದೇ ಬುಟ್ಟಿಯಲ್ಲಿಡಬೇಡ' ಎಂಬ ಜಾಣ್ನುಡಿಯ ಮಹತ್ವವನ್ನು ಬ್ಯಾಂಕುಗಳು ಸ್ವಾನುಭವದಿಂದ ಅರ್ಥಮಾಡಿಕೊಂಡಿವೆ. ಆದರೆ ಸಂಕೀರ್ಣವಾಗುತ್ತಿರುವ ತಂತ್ರಜ್ಞಾನದ ಫಲವಾಗಿ ಅಧಿಕ ಪ್ರಮಾಣದ ಬಂಡವಾಳ ಹೂಡಿಕೆ ಅನಿವಾರ್ಯವೆನಿಸಿತು. ದೊಡ್ಡ ಕೈಗಾರಿಕೆಗಳಿಂದ ಒಂದೇ ಸಮನೆ ಹೆಚ್ಚುತ್ತಿದ್ದ ಬೇಡಿಕೆಯನ್ನು ಪೂರೈಸಲು ಬ್ಯಾಂಕುಗಳು ತಮ್ಮ ನಷ್ಟಸಂಭವದ ಸಮಸ್ಯೆಗೆ ಒಂದು ಪರಿಹಾರವನ್ನು ಕಂಡುಕೊಳ್ಳಬೇಕಾಯಿತು. ಅನಿವಾರ್ಯವಾದ ನಷ್ಟಸಂಭವವನ್ನು ಹಂಚಿಕೊಳ್ಳುವ ಮೂಲಕ ಕಡಮೆ ಮಾಡಿಕೊಳ್ಳಬಹುದೆಂದು ಬ್ಯಾಂಕುಗಳಿಗೆ ತೋರಿತು.

ಬೃಹತ್ ಉದ್ಯಮವೊಂದರ ಉದರಿ ಅಗತ್ಯಗಳನ್ನು ಪೂರೈಸುವುದು ಒಂದೇ ಹಣಕಾಸು ಸಂಸ್ಥೆಗೆ ಅಸಾಧ್ಯವೆನಿಸಿದಾಗ, ಸಾಲಗಳ ಒಗ್ಗೂಡಿಕೆಯ (ಸಿಂಡಿಕೇಷನ್ ಆಫ್ ಲೋನ್ಸ್) ವಿಧಾನ ಸಹಾಯಕವಾಯಿತು. ಹಲವಾರು ಹಣಕಾಸು ಸಂಸ್ಥೆಗಳು ಒಂದು ಉದ್ಯಮ ಘಟಕಕ್ಕೆ ಪ್ರತ್ಯೇಕವಾಗಿ ಸಾಲಗಳನ್ನು ನೀಡುವಂತೆ ವ್ಯವಸ್ಥೆ ಮಾಡುವುದೇ ಸಾಲಗಳ ಒಗ್ಗೂಡಿಕೆ. ಈ ವ್ಯವಸ್ಥೆಯಲ್ಲಿ ನಷ್ಟಸಂಭವದ ತೊಡಕು ಪರಿಹಾರವಾಯಿತಾದರೂ ಸಾಲದ ಉಸ್ತುವಾರಿಯ ಸಮಸ್ಯೆ ಎದುರಾಯಿತು.

ಇನ್ನೊಂದು ವಿಧಾನವಾದ ಭಾಗೀದಾರಿಕೆಯಲ್ಲಿ (ಪಾರ್ಟಿಸಿಪೇಷನ್) ಹಣಕಾಸು ಸಂಸ್ಥೆಯೊಂದು ಉದ್ಯಮ ಘಟಕಕ್ಕೆ ಸಾಲ ನೀಡುತ್ತದೆ ಮತ್ತು ಆ ಸಾಲದಲ್ಲಿ ಭಾಗವಹಿಸುವ ಆಸಕ್ತಿಯುಳ್ಳ ಇತರ ಹಣಕಾಸು ಸಂಸ್ಥೆಗಳಿಂದ ಹಣ ಪಡೆದು ಆಯಾ ಸಂಸ್ಥೆಗಳಿಗೆ ಅವು ನೀಡಿದ ಮೊತ್ತಗಳಿಗೆ ಭಾಗೀದಾರಿಕೆ ಪ್ರಮಾಣಪತ್ರ (ಪಾರ್ಟಿಸಿಪೇಷನ್ ಸರ್ಟಿಫಿಕೇಟ್) ನೀಡುತ್ತದೆ. ಉದಾ : ಕಂಪನಿಯೊಂದಕ್ಕೆ 'ಎ' ಬ್ಯಾಂಕು 500 ಲಕ್ಷ ರೂ. ಸಾಲ ನೀಡುತ್ತದೆ. 'ಬಿ', 'ಸಿ' ಹಾಗೂ 'ಡಿ' ಬ್ಯಾಂಕುಗಳು ತಲಾ 100 ಲಕ್ಷ ರೂ.ಗಳನ್ನು 'ಎ' ಬ್ಯಾಂಕಿಗೆ ನೀಡಿ ತಾವು ನೀಡಿದ ಮೊತ್ತಗಳಿಗೆ ಭಾಗೀದಾರಿಕೆ ಪ್ರಮಾಣಪತ್ರ ಪಡೆಯುತ್ತವೆ. ಸಾಲದಿಂದ ಉದ್ಭವಿಸುವ ಲಾಭ ನಷ್ಟಗಳನ್ನು ಭಾಗೀದಾರ ಬ್ಯಾಂಕುಗಳು ಹಂಚಿಕೊಳ್ಳುವಂತೆ ಅಥವಾ ಭಾಗೀದಾರ ಬ್ಯಾಂಕುಗಳಿಗೆ ನಿರ್ದಿಷ್ಟ ದರದಲ್ಲಿ ಬಡ್ಡಿಕೊಡುವಂತೆ ಒಪ್ಪಂದವಾಗಿರುತ್ತದೆ. ಇಲ್ಲಿ ಖಾತೆಯ ನಿರ್ವಹಣೆ, ಉದರಿ ಮೇಲುಸ್ತುವಾರಿ ಮುಂತಾದ ಎಲ್ಲ ಜವಾಬ್ದಾರಿಗಳೂ ಸಾಲ ನೀಡುವ ಬ್ಯಾಂಕಿನವೇ ಆಗಿರುತ್ತವೆ.

ಸಹಭಾಗಿತ್ವದ (ಕಾನ್ಸೋರ್ಷಿಯಮ್) ಪರಿಕಲ್ಪನೆ ಈ ಎರಡೂ ಪರಿಕಲ್ಪನೆಗಳಿಗಿಂತ ವಿಭಿನ್ನವಾಗಿದ್ದು ಸಾಲನೀಡಿಕೆ ಕ್ಷೇತ್ರದಲ್ಲಿ ಮಹತ್ವಪಡೆದಿದೆ. ನಷ್ಟಸಂಭವವನ್ನು ಹಂಚಿಕೊಳ್ಳುವುದೊಂದೇ ಅಲ್ಲದೆ ವಿವಿಧ ಹಣಕಾಸು ಸಂಸ್ಥೆಗಳ ತರಬೇತಿ ಹೊಂದಿದ ಸಿಬ್ಬಂದಿಯ ಹಾಗೂ ತಾಂತ್ರಿಕ ಸಲಹಾ ತಜ್ಞರ ಕುಶಲತೆಯ ಉಪಯೋಗ ಸಹಭಾಗಿತ್ವದಲ್ಲಿ ದೊರೆಯುತ್ತದೆ. ನಿರ್ದಿಷ್ಟ ಕೈಗಾರಿಕೆಗೆ ಸಾಲನೀಡಿಕೆಯಲ್ಲಿ ವಿಶೇಷ ಪರಿಣತಿ ಹೊಂದಿರುವ ಸಂಸ್ಥೆಯೊಂದು ಸಹಭಾಗಿತ್ವ ಸಾಲನೀಡಿಕೆಯಲ್ಲಿ ಭಾಗವಹಿಸಿದರೆ, ಅದರ ಅನುಕೂಲ ಸಹಭಾಗಿತ್ವದಲ್ಲಿನ ಇತರ ಸಂಸ್ಥೆಗಳಿಗೂ ದೊರೆಯುತ್ತದೆ. ಹೀಗೆ—ಸಹಭಾಗಿತ್ವದಲ್ಲಿ ಸಾಲ ಪಡೆಯುವ ಸಂಸ್ಥೆಗೂ ಸಾಲ ನೀಡುವ ಸಂಸ್ಥೆಗಳಿಗೂ ಹಲವು ಅನುಕೂಲತೆಗಳುಂಟು.

ಸಹಭಾಗಿತ್ವದಲ್ಲಿ ಕನಿಷ್ಠ ಎರಡು ಬ್ಯಾಂಕು*ಗಳಿರುತ್ತವೆ. ಹಲವು ಬಾರಿ ಸಹಭಾಗಿತ್ವದಲ್ಲಿನ ಬ್ಯಾಂಕುಗಳ ಸಂಖ್ಯೆ

* ಹಣಕಾಸು ಸಂಸ್ಥೆಗೆ ಪರ್ಯಾಯ ಪದವಾಗಿ ಈ ಪದವನ್ನು ಈ ಲೇಖನದಲ್ಲಿ ಬಳಸಲಾಗಿದೆ. ಬ್ಯಾಂಕೇತರ ಹಣಕಾಸು ಸಂಸ್ಥೆಗಳೂ ಸಹಭಾಗಿತ್ವ ಸಾಲನೀಡಿಕೆಯಲ್ಲಿ ಭಾಗವಹಿಸುವುದು ಸಾಮಾನ್ಯ.

ಹತ್ತಿರ ವರೆಗೂ ಇರುತ್ತದೆ. ಭಾಗವಹಿಸುವ ಬ್ಯಾಂಕುಗಳ ಮುಂಗಡವನ್ನು ಹಂಚಿಕೊಳ್ಳುತ್ತವೆ. ಬ್ಯಾಂಕುಗಳ ಸಂಖ್ಯೆ ಒಂದಕ್ಕಿಂತ ಹೆಚ್ಚು ಇರುವುದರಿಂದ ಒಬ್ಬ ಮುಖಂಡನ ಅಗತ್ಯ ಇದ್ದು, ಭಾಗವಹಿಸುವ ಬ್ಯಾಂಕುಗಳಲ್ಲಿ ಒಂದು ಮುಖಂಡನಾಗಿ ವರ್ತಿಸುತ್ತದೆ. ಮುಖಂಡತ್ವ ವಹಿಸುವ ಬ್ಯಾಂಕನ್ನು ಅಗ್ರ ಬ್ಯಾಂಕ್ ಎಂದು ಕರೆಯುವುದು ರೂಢಿ. ಸಾಧಾರಣವಾಗಿ ಅಗ್ರ ಬ್ಯಾಂಕ್ ಮುಂಗಡದಲ್ಲಿ ತುಲನಾತ್ಮಕವಾಗಿ ಹೆಚ್ಚಿನ ಭಾಗವನ್ನು ನೀಡುವುದಾದರೂ ಹಾಗೆ ಮಾಡಲೇಬೇಕೆಂಬುದೇನಿಲ್ಲ.

ಕಂಪನಿಯೊಂದು ಸಾಲಕ್ಕಾಗಿ ಅರ್ಜಿ ನೀಡುವಾಗ ಬ್ಯಾಂಕು ಕಂಪನಿಯಿಂದ ಅನೇಕ ವಿವರಗಳನ್ನು ಪಡೆಯುತ್ತದೆ. ಸಹಭಾಗಿತ್ವ ಬ್ಯಾಂಕಿಂಗ್‌ನಲ್ಲಿ ಕಂಪನಿಯ ಹಣಕಾಸು ಅಗತ್ಯಗಳನ್ನು ಕುರಿತು ಚರ್ಚಿಸಲು ಅಗ್ರ ಬ್ಯಾಂಕ್ ಭಾಗವಹಿಸುವ ಬ್ಯಾಂಕುಗಳ ಪ್ರತಿನಿಧಿಗಳ ಸಭೆ ಕರೆಯುತ್ತದೆ. ಅಗತ್ಯವಿದ್ದಲ್ಲಿ ಸಾಲಪಡೆಯುವ ಕಂಪನಿ ಅಗ್ರ ಬ್ಯಾಂಕಿನ ಮೂಲಕ ಸಹಭಾಗಿತ್ವಕ್ಕೆ ತನ್ನ ಮನವಿಗಳನ್ನು ಸಲ್ಲಿಸುತ್ತದೆ. ಹೀಗೆ ಸಾಲಗಾರ ಕಂಪನಿ ಹಾಗೂ ಸದಸ್ಯ ಬ್ಯಾಂಕುಗಳ ನಡುವಣ ಸಂಪರ್ಕಕ್ಕೆ ಅಗ್ರ ಬ್ಯಾಂಕ್ ಮಾಧ್ಯಮವಾಗುತ್ತದೆ.

### ದಸ್ತಾವೇಜುಗಳು

ಸಾಲಪಡೆಯುವ ಕಂಪನಿಯಿಂದ ಪಡೆಯುವ ಜಂಟಿ ತೋರಾಧಾರ ಒಪ್ಪಂದ (ಜಾಯಿಂಟ್ ಹೈಪಾತಿಕೇಷನ್ ಅಗ್ರೀಮೆಂಟ್)ಹಾಗೂ ಭಾಗವಹಿಸುವ ಬ್ಯಾಂಕುಗಳ ಪರಸ್ಪರ ಒಪ್ಪಂದ ಇವು ಸಹಭಾಗಿತ್ವ ಸಾಲನೀಡಿಕೆಯಲ್ಲಿ ಬರುವ ಎರಡು ಮುಖ್ಯ ದಸ್ತಾವೇಜುಗಳು. ಮೊದಲನೆಯ ದಸ್ತಾವೇಜಿನಂತೆ ಸಾಲಪಡೆಯುವ ಕಂಪನಿ ತನ್ನ ಕಚ್ಚಾ ಸರಕಿನ ದಾಸ್ತಾನು ಮುಂತಾದುವನ್ನು ಸಹಭಾಗಿತ್ವದಲ್ಲಿ ಭಾಗವಹಿಸುವ ಎಲ್ಲ ಬ್ಯಾಂಕುಗಳಿಗೆ ತೋರಾಧಾರ ಮಾಡುತ್ತದೆ. ಹಾಗೆ ತೋರಾಧಾರ ಮಾಡಿದ ದಾಸ್ತಾನು ಮುಂತಾದವುಗಳ ಮೇಲಿನ ಭಾಗವಹಿಸುವ ಬ್ಯಾಂಕುಗಳ ಹಕ್ಕು ಅವು ತಮಗೆ ನೀಡಿರುವ ಮುಂಗಡ ಮಿತಿಗಳಿಗೆ ಅನುಗುಣವಾಗಿ ಇರುತ್ತದೆಂಬುದನ್ನೂ ಸ್ಪಷ್ಟಪಡಿಸುತ್ತದೆ. ಇದರೊಡನೆ ಸಾಧಾರಣವಾಗಿ ಸಾಲಗಳನ್ನು ನೀಡುವಾಗ ಪಡೆಯುವ ಒಪ್ಪಂದದಲ್ಲಿರುವ ಅನೇಕ ಇತರ ನಿಬಂಧನೆಗಳು ಈ ದಸ್ತಾವೇಜಿನಲ್ಲೂ ಇರುತ್ತವೆ.

ಸಹಭಾಗಿತ್ವ ಸಾಲನೀಡಿಕೆಯಲ್ಲಿ 'ಭಾಗವಹಿಸುವ ಬ್ಯಾಂಕುಗಳ ಪರಸ್ಪರ ಒಪ್ಪಂದ' ವಿಶಿಷ್ಟವಾದುದು. ಇದು ಅಗ್ರ ಬ್ಯಾಂಕ್ ಹಾಗೂ ಇತರ ಸದಸ್ಯ ಬ್ಯಾಂಕುಗಳ ನಡುವಣ ಒಪ್ಪಂದ. ಸಾಲಗಾರ ಕಂಪನಿಯ ಖಾತೆಗಳ ನಿರ್ವಹಣೆ, ದಾಸ್ತಾನಿನ ಪರಿವೀಕ್ಷಣೆ, ನಗದು ಉದರಿ ಸೌಲಭ್ಯದ ಮಿತಿಯ ಬದಲಾವಣೆ, ಅಗ್ರ ಬ್ಯಾಂಕ್ ಮತ್ತು ಸದಸ್ಯ ಬ್ಯಾಂಕುಗಳ ಜವಾಬ್ದಾರಿ ಮುಂತಾದ ಅನೇಕ ವಿಷಯಗಳನ್ನು ಕುರಿತಂತೆ ಅಗ್ರ ಬ್ಯಾಂಕ್ ಮತ್ತು ಇತರ ಬ್ಯಾಂಕುಗಳ ನಡುವಣ ಈ ಒಪ್ಪಂದವೇ ಸಹಭಾಗಿತ್ವ ಬ್ಯಾಂಕಿಂಗಿನ ಜೀವಾಳ.

ಸದಸ್ಯ ಬ್ಯಾಂಕುಗಳೊಡನೆ ಚರ್ಚಿಸಿ ಬ್ಯಾಂಕಿನ ವಕೀಲರ ನೆರವು ಪಡೆದು ಈ ದಸ್ತಾವೇಜುಗಳನ್ನು ಅಗ್ರ ಬ್ಯಾಂಕ್ ಸಿದ್ಧಪಡಿಸುತ್ತದೆ. ಹಲವು ಬಾರಿ ಈ ಕಾರ್ಯಕ್ಕೆ ಅಗ್ರ ಬ್ಯಾಂಕ್ ಬಹು ದೀರ್ಘ ಸಮಯ ತೆಗೆದುಕೊಳ್ಳುವುದೂ ಉಂಟು. ಒಪ್ಪಂದದ ಕೆಲವು ಅಂಶಗಳ ಬಗೆಗೆ ಸದಸ್ಯ ಬ್ಯಾಂಕುಗಳಲ್ಲಿ ಭಿನ್ನಾಭಿಪ್ರಾಯ ಉಂಟಾಗುವುದೇ ಇದಕ್ಕೆ ಮುಖ್ಯ ಕಾರಣ. ಇಂಥ ಅನೇಕ ಸಂದರ್ಭಗಳಲ್ಲಿ ಅಗ್ರ ಬ್ಯಾಂಕಿನ ಮುಖಂಡತ್ವ ಒರೆಗೆ ಹಚ್ಚಲ್ಪಡುತ್ತದೆ.

ಸಾಲ ಪಡೆಯುವ ಕಂಪನಿಯು ಜಂಟಿ ತೋರಾಧಾರ ಒಪ್ಪಂದವನ್ನು ಸಹಿ ಮಾಡಿ ಅಗ್ರ ಬ್ಯಾಂಕಿಗೆ ನೀಡುತ್ತದೆ. ಜಂಟಿ ತೋರಾಧಾರ ಒಪ್ಪಂದ ಮತ್ತು ಬ್ಯಾಂಕುಗಳ ನಡುವಣ ಪರಸ್ಪರ ಒಪ್ಪಂದ ಈ ಎರಡೂ ಒಪ್ಪಂದಗಳ ಒಂದೊಂದು ಪ್ರತಿಯನ್ನು ಭಾಗವಹಿಸುವ ಎಲ್ಲ ಬ್ಯಾಂಕುಗಳಿಗೂ ಅಗ್ರ ಬ್ಯಾಂಕ್ ಒದಗಿಸುತ್ತದೆ.

### ಖಾತೆಗಳ ನಿರ್ವಹಣೆ

ಸಹಭಾಗಿತ್ವದ ಪ್ರತಿ ಸದಸ್ಯ ಬ್ಯಾಂಕೂ ಸಾಲಗಾರ

ಸಾಲಗಾರ : ನವ ಕರ್ನಾಟಕ ನಿರ್ಮಾಣ ಕಂಪನಿ
ಒಟ್ಟು ಉದರಿ ಮಿತಿ : ರೂ. 175 ಲಕ್ಷ

| ಭಾಗ ವಹಿಸುವ ಬ್ಯಾಂಕ್ | ಉದರಿ ಮಿತಿ ರೂ. | ಒಟ್ಟು ಉದರಿ ಮಿತಿಯ ಶೇಕಡ |
|---|---|---|
| ಕನ್ನಡ ಬ್ಯಾಂಕ್ (ಅಗ್ರ ಬ್ಯಾಂಕ್) | 45 00,000 | 25.72 |
| ಭಾರತೀಯ ಸ್ಟೇಟ್ ಬ್ಯಾಂಕ್ | 15 00,000 | 8 58 |
| ಸಿಂಡಿಕೇಟ್ ಬ್ಯಾಂಕ್ | 30,00,000 | 17.14 |
| ಪಂಜಾಬ್ ನ್ಯಾಷನಲ್ ಬ್ಯಾಂಕ್ | 30,00,000 | 17.14 |
| ವಿಜಯಾ ಬ್ಯಾಂಕ್ | 30,00,000 | 17.14 |
| ಅಪೆಕ್ಸ್ ಬ್ಯಾಂಕ್ | 25,00,000 | 14.28 |

ಕಂಪನಿಯ ಒಂದೊಂದು ಖಾತೆಯನ್ನು ತೆರೆಯುತ್ತದೆ. ಕಂಪನಿಗೆ ಅಗತ್ಯವಿರುವ ನಗದು ಉದರಿಯ ಮೊತ್ತವೂ, ಸದಸ್ಯ ಬ್ಯಾಂಕುಗಳು ಯಾವ ಪ್ರಮಾಣದಲ್ಲಿ ಅದನ್ನು ಒದಗಿಸಬೇಕೆಂಬುದೂ ಮೊದಲೇ ನಿಶ್ಚಿತವಾಗಿರುತ್ತವೆ. ಹೀಗೆ ಕಂಪನಿಗೆ ನೀಡಿರಲು ಒಪ್ಪಿರುವ ನಗದು ಉದರಿಯ ಮಿತಿಗೆ ಒಳಪಟ್ಟು ಸದಸ್ಯ ಬ್ಯಾಂಕು ಕಂಪನಿಗೆ ಉದರಿ ಒದಗಿಸುತ್ತದೆ.

ಒಂದು ಉದಾಹರಣೆಯಿಂದ ಇದನ್ನು ಸ್ಪಷ್ಟೀಕರಿಸ ಬಹುದು :

ಸಾಧಾರಣವಾಗಿ ಮುಂಗಡದ ಮೇಲಿನ ಬಡ್ಡಿದರವನ್ನು ಸದಸ್ಯ ಬ್ಯಾಂಕುಗಳು ಒಮ್ಮತದಿಂದ ನಿರ್ಧರಿಸುತ್ತವೆ ಯಾದರೂ ಒಮ್ಮೊಮ್ಮೆ ಸದಸ್ಯ ಬ್ಯಾಂಕುಗಳಿಗೆ ತಮ್ಮ ತಮ್ಮ ಬಡ್ಡಿದರವನ್ನು ವಿಧಿಸಲು ಅವಕಾಶಕೊಡುವುದೂ ಉಂಟು.

ಯಾವುದೇ ಸದಸ್ಯ ಬ್ಯಾಂಕಿನಲ್ಲಿರುವ ಕಂಪನಿಯ ಖಾತೆಗೆ ದೊಡ್ಡ ಮೊತ್ತದ ಜಮಾ ಬಂದಾಗ ಆ ಮೊತ್ತವನ್ನು ಇತರ ಬ್ಯಾಂಕುಗಳೊಂದಿಗೆ ಹಂಚಿಕೊಂಡು, ಕಂಪನಿಯು ವಿವಿಧ ಬ್ಯಾಂಕುಗಳಲ್ಲಿ ಹೊಂದಿರುವ ಖಾತೆಗಳ ಹಾಲಿ ಶಿಲ್ಕು ಆಯಾ ಬ್ಯಾಂಕು ನೀಡಲು ಒಪ್ಪಿರುವ ಮಿತಿಗೆ ಸಾಧ್ಯವಾದಷ್ಟು ಮಟ್ಟಿಗೆ ಅನುಗುಣವಾಗಿರುವಂತೆ ನೋಡಿಕೊಳ್ಳುವುದು ಸಂಬಂಧಿಸಿದ ಬ್ಯಾಂಕಿನ ಕರ್ತವ್ಯ. ಕಂಪನಿಯು ಒಂದೇ ಬ್ಯಾಂಕಿಗೆ ಜಮಾ ನೀಡುತ್ತಿದ್ದರೆ ಅದು ಪಕ್ಷಪಾತವಾಗುತ್ತದೆ.

ಸಾಲಗಾರ ಕಂಪನಿಯು ಸಹಭಾಗಿತ್ವದ ಎಲ್ಲ ಸದಸ್ಯ ಬ್ಯಾಂಕುಗಳಿಗೂ ಎರಡು ವಾರಕ್ಕೊಮ್ಮೆ, ತಿಂಗಳಿಗೊಮ್ಮೆ— ಹೀಗೆ ನಿಗದಿಪಡಿಸಿದಂತೆ ಕಾಲಕಾಲಕ್ಕೆ ದಾಸ್ತಾನು ತಃಖ್ತೆ ಗಳನ್ನು ಒದಗಿಸಬೇಕಾಗುತ್ತದೆ. ಸಾಲಗಾರ ಕಂಪನಿಯು ವಿವಿಧ ಬ್ಯಾಂಕುಗಳಿಂದ ಪಡೆಯಬಹುದಾದ ಉದರಿಯ ಡ್ರಾಯಿಂಗ್ ಪರಿಮಿತಿಯನ್ನು (drawing power) ಲೆಕ್ಕಮಾಡಿ ಆದಷ್ಟು ಬೇಗ ಸದಸ್ಯ ಬ್ಯಾಂಕುಗಳಿಗೆ ತಿಳಿಸು ವುದು ಅಗ್ರ ಬ್ಯಾಂಕಿನ ಜವಾಬ್ದಾರಿ. ಈ ಮಿತಿಗಳೊಳಗೆ ಸದಸ್ಯ ಬ್ಯಾಂಕುಗಳು ಕಂಪನಿಯ ಖಾತೆ ನಿರ್ವಹಿಸಬೇಕು. ಹೆಚ್ಚಿನ ಸೌಲಭ್ಯ ನೀಡಬೇಕಾದಲ್ಲಿ ಎಲ್ಲ ಬ್ಯಾಂಕುಗಳ ಅನುಮತಿ ಅಗತ್ಯ. ಪೂರ್ವಾನುಮತಿ ಇಲ್ಲದೆ ಮೇಲೆ ತಿಳಿಸಿದ ಪರಿಮಿತಿಯನ್ನು ಮೀರಿ ಒದಗಿಸಿದ ಹೆಚ್ಚಿನ ಉದರಿಗೆ ಕಂಪನಿಯ ದಾಸ್ತಾನುಗಳ ತೋರಾಧಾರ ದೊರೆಯುವುದಿಲ್ಲ.

ಅಗತ್ಯವಾದ ಮಾಹಿತಿಯನ್ನು ಸಕಾಲದಲ್ಲಿ ಒದಗಿಸು ವಂತೆ ಸಹಭಾಗಿತ್ವದ ಸದಸ್ಯ ಬ್ಯಾಂಕುಗಳು ಕಂಪನಿಯನ್ನು ಶಿಸ್ತುಗೊಳಿಸಬೇಕು. ಸಾಮಾನ್ಯವಾಗಿ ಮಾಡುವಂತೆ ಇಂಥ ಮಾಹಿತಿಗಳನ್ನು ಕೇವಲ ಬ್ಯಾಂಕಿನ ಶಾಶ್ವತ ದಾಖಲೆಗಳಾಗಿ ಮಾಡಿ ತೃಪ್ತಿಗೊಳ್ಳದೆ, ಪಡೆದ ಮಾಹಿತಿಯನ್ನು ಅಧ್ಯಯಿಸಿ ಖಾತೆಯ ನಡಾವಳಿಯಲ್ಲಿರಬಹುದಾದ ಲೋಪದೋಷ ಗಳನ್ನು ಕಂಡುಹಿಡಿಯಬೇಕು.

ಕಂಪನಿಯ ನಗದು ಉದರಿ ಖಾತೆಯಲ್ಲಿನ ವಹಿವಾಟು ಗಳ ಬಗೆಗೆ ಹಲವು ವಿವರಗಳನ್ನು ಸದಸ್ಯ ಬ್ಯಾಂಕುಗಳು ಪ್ರತಿ ತಿಂಗಳೂ ತಪ್ಪದೆ ಅಗ್ರ ಬ್ಯಾಂಕಿಗೆ ನೀಡಬೇಕು. ಖಾತೆಯ ಧನಿಕೆ ಹಾಗೂ ಋಣಿಕೆ ವಹಿವಾಟುಗಳ ಮೊತ್ತ, ಸರಾಸರಿ ಶಿಲ್ಕು, ತಿಂಗಳ ಕನಿಷ್ಠ ಹಾಗೂ ಗರಿಷ್ಠ ಸೆಳೆತಗಳು (drawings) ಇವೇ ಮುಂತಾದ ವಿವರಗಳನ್ನು ಪ್ರತಿ ತಿಂಗಳೂ ಒಂದು ನಿಗದಿಯಾದ ದಿನಾಂಕದೊಳಗೆ ಅಗ್ರ ಬ್ಯಾಂಕಿಗೆ ಸಲ್ಲಿಸಬೇಕು.

### ನಗದು ಉದರಿ ಮಿತಿಯಲ್ಲಿಯ ವ್ಯತ್ಯಾಸ

ಕಂಪನಿಗೆ ನೀಡಲಾದ ನಗದು ಉದರಿಯ ಮಿತಿಯನ್ನು ಹೆಚ್ಚಿಸಬೇಕಾದರೆ ಎಲ್ಲ ಸದಸ್ಯ ಬ್ಯಾಂಕುಗಳ ಒಪ್ಪಿಗೆ ಅಗತ್ಯ. ಹೀಗೆ ಸದಸ್ಯ ಬ್ಯಾಂಕುಗಳ ಒಪ್ಪಿಗೆ ಪಡೆದನಂತರ ಅಗತ್ಯ ವಿದ್ದಲ್ಲಿ ಅಗ್ರ ಬ್ಯಾಂಕು ಪುನಃ ಕಂಪನಿಯಿಂದ ಜಂಟಿ ತೋರಾಧಾರ ಒಪ್ಪಂದವನ್ನು ಪಡೆಯುತ್ತದೆ. ಆದರೆ ಮಿತಿಯ ಏರಿಕೆ ತಾತ್ಕಾಲಿಕವಾಗಿದ್ದಾಗ ಹೀಗೆ ಮಾಡುವ ಅಗತ್ಯವಿರಲಾರದು.

### ದಾಸ್ತಾನಿನ ಪರಿವೀಕ್ಷಣೆ

ಸಾಲಗಾರ ಕಂಪನಿಯು ಸದಸ್ಯ ಬ್ಯಾಂಕುಗಳಿಗೆ ಕಾಲ ಕಾಲಕ್ಕೆ ನೀಡುವ ದಾಸ್ತಾನು ಪಟ್ಟಿಯನ್ನು ಪರಿಶೀಲಿಸಿ, ಕಂಪನಿಯ ಆವರಣದಲ್ಲಿರುವ ದಾಸ್ತಾನಿನ ಪರಿವೀಕ್ಷಣೆ ಮಾಡುವ ಜವಾಬ್ದಾರಿ ಸದಸ್ಯ ಬ್ಯಾಂಕುಗಳದು. ಸದಸ್ಯ ಬ್ಯಾಂಕುಗಳು ಈ ಜವಾಬ್ದಾರಿಯನ್ನು ಸರದಿಯಂತೆ ನಿರ್ವ ಹಿಸಬೇಕಾಗುತ್ತದೆ. ಪರಿವೀಕ್ಷಣೆಯ ಕಾಲದಲ್ಲಿ ದಾಸ್ತಾನಿನ ಪ್ರಮಾಣದಲ್ಲಿ ಕೊರತೆ ಮುಂತಾದ ಲೋಪದೋಷಗಳು ಕಂಡುಬಂದರೆ ಅವನ್ನು ಇತರ ಸದಸ್ಯ ಬ್ಯಾಂಕುಗಳ ಗಮನಕ್ಕೆ ತಂದು ಅಗತ್ಯವಿದ್ದಲ್ಲಿ ಡ್ರಾಯಿಂಗ್ ಪರಿಮಿತಿ ಯನ್ನು ಕಡಮೆ ಮಾಡಬೇಕಾಗುತ್ತದೆ.

### ಸದಸ್ಯ ಬ್ಯಾಂಕುಗಳ ಸಭೆಗಳು

ಸಹಭಾಗಿತ್ವದ ಸದಸ್ಯರ ನಡುವೆ ಮುಕ್ತ ವಿಚಾರ ವಿನಿಮಯಕ್ಕೆ ಅವಕಾಶವಿರಬೇಕಾದ್ದು ಬಹು ಮುಖ್ಯ. ಕನಿಷ್ಠ ತಿಂಗಳಿಗೊಮ್ಮೆಯಾದರೂ ಸದಸ್ಯ ಬ್ಯಾಂಕುಗಳ ಪ್ರತಿ ನಿಧಿಗಳು ಸಭೆ ಸೇರಿ ಕಂಪನಿಯ ಒಟ್ಟು ಹೊಣೆ ಮೊದಲಾದ ಅಂಶಗಳನ್ನು ಲೆಕ್ಕ ಮಾಡಿಕೊಳ್ಳುವುದು ಉದರಿ ಮೇಲುಸ್ತು ವಾರಿ ದೃಷ್ಟಿಯಿಂದ ಅತ್ಯಾವಶ್ಯಕ. ಕಂಪನಿಯ ಸಮಸ್ಯೆಗಳು, ಅದಕ್ಕೆ ಅಗತ್ಯವಾಗಬಹುದಾದ ವಿಶೇಷ ತಾತ್ಕಾಲಿಕ ಹಣಕಾಸು ನೆರವು ಮತ್ತಿತರ ವಿಷಯಗಳ ಬಗೆಗೆ ಅಗ್ರ ಬ್ಯಾಂಕು ಅಗತ್ಯ ಮಾಹಿತಿ ಸಂಗ್ರಹಿಸಿ, ಸದಸ್ಯ ಬ್ಯಾಂಕು ಗಳಿಗೆ ಸಾಕಷ್ಟು ಮುನ್ಸೂಚನೆ ನೀಡಿ ಸಭೆ ಕರೆಯಬೇಕಾಗು

ತ್ತದೆ. ಹೀಗೆ ಮಾಡಿದರೆ ಸದಸ್ಯ ಬ್ಯಾಂಕುಗಳ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಅನುಕೂಲವಾಗುತ್ತದೆ. ಅಧಿಕ ಹಣಕಾಸು ನೆರವಿನ ಪ್ರಶ್ನೆ ಬಂದಾಗ ತಮ್ಮ ಮೇಲಧಿಕಾರಿಗಳೊಡನೆ ಆ ಬಗ್ಗೆ ಚರ್ಚಿಸಿ ಒಂದು ನಿರ್ಣಯಕ್ಕೆ ಬರಲು ಸದಸ್ಯ ಬ್ಯಾಂಕಿನ ಪ್ರತಿನಿಧಿಗಳಿಗೆ ಕಾಲಾವಕಾಶಬೇಕಾಗುತ್ತದೆ. ಇಂಥ ಸಂದರ್ಭಗಳಲ್ಲಿ ಮುನ್ಸೂಚನೆ ನೀಡದೆ ಸಭೆ ಕರೆಯುವುದು ವ್ಯರ್ಥವಾಗುತ್ತದೆ. ಭಾಗವಹಿಸುವ ಪ್ರತಿನಿಧಿಗಳು ಸಾಮಾನ್ಯವಾಗಿ ಕಿರಿಯ ಅಧಿಕಾರಿಗಳಾಗಿದ್ದು, ಸಭೆಯಲ್ಲಿ ಸಮಸ್ಯೆ ಎದುರಾದಾಗ "ಈ ಬಗ್ಗೆ ನಮ್ಮ ಮೇಲಧಿಕಾರಿಗಳಿಗೆ ಬರೆದಿದ್ದೇವೆ. ನೋಡೋಣ" ಎನ್ನುವುದಕ್ಕಿಂತ ಹೆಚ್ಚಿನ ಪ್ರತಿಕ್ರಿಯೆಯನ್ನು ಅವರಿಂದ ನಿರೀಕ್ಷಿಸುವುದು ತಪ್ಪಾಗುತ್ತದೆ. ಆದ್ದರಿಂದ ಸದಸ್ಯ ಬ್ಯಾಂಕುಗಳ ಸಭೆಗಳನ್ನು ಕರೆಯುವಾಗ ಅಗ್ರ ಬ್ಯಾಂಕ್ ತುಂಬ ಮುನ್ನೆಚ್ಚರಿಕೆ ತೆಗೆದುಕೊಳ್ಳಬೇಕು.

ಕಂಪನಿಯು ಮುಂದಿನ ಮೂರು ತಿಂಗಳಲ್ಲಿ ಮಾಡಬೇಕಾದ ವೆಚ್ಚಗಳನ್ನು ಅದರಿಂದಲೇ ಅಂದಾಜು ಮಾಡಿಸಿ ಅಗ್ರ ಬ್ಯಾಂಕು ಅದನ್ನು ಇತರ ಸದಸ್ಯ ಬ್ಯಾಂಕುಗಳಿಗೆ ತಿಳಿಯಪಡಿಸಿದರೆ ಉದರಿ ನಿರ್ವಹಣೆಗೆ ಹೆಚ್ಚು ಅನುಕೂಲವಾಗುತ್ತದೆ. ಸಹಭಾಗಿತ್ವದ ಸಭೆಗಳಲ್ಲಿ ಕಂಪನಿಯ ಪ್ರತಿನಿಧಿಯನ್ನೂ ಕರೆಸಿ ಇಂಥ ವಿಷಯಗಳನ್ನು ಕೂಲಂಕಷವಾಗಿ ಚರ್ಚೆ ಮಾಡಿ ನಿರ್ಣಯಗಳನ್ನು ಕೈಗೊಳ್ಳಬೇಕಾಗುತ್ತದೆ.

ಸಹಭಾಗಿತ್ವದ ಮುಖಂಡತ್ವವನ್ನು ವಹಿಸಿದ ಅಗ್ರ ಬ್ಯಾಂಕ್ ಸಭೆಯ ಕಲಾಪಗಳನ್ನು ಗೊಂದಲವಿಲ್ಲದೆ ಅಚ್ಚುಕಟ್ಟಾಗಿ ನಿರ್ವಹಿಸುವಲ್ಲಿ ಜಾಣ್ಮೆ ತೋರಬೇಕು. ಇಲ್ಲದಿದ್ದರೆ ಸಕಾಲಿಕ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಾಧ್ಯವಾಗದೆ ಕಂಪನಿಗೆ/ಸದಸ್ಯ ಬ್ಯಾಂಕುಗಳಿಗೆ ನಷ್ಟವಾಗುವ ಸಂಭವವುಂಟು.

ಸದಸ್ಯ ಬ್ಯಾಂಕುಗಳು ಸಾಲಗಾರ ಕಂಪನಿಯ ವಹಿವಾಟುಗಳ ಬಗೆಗೆ ಮುಖ್ಯವೆನಿಸುವ ವಿಷಯಗಳನ್ನು ಅಗ್ರ ಬ್ಯಾಂಕಿಗೆ ತಿಳಿಸಬೇಕಾಗುತ್ತದೆ. ಪರಿಸ್ಥಿತಿ ಗಂಭೀರವಾಗಿದ್ದಲ್ಲಿ ಯುಕ್ತ ಕ್ರಮ ಕೈಗೊಳ್ಳಲು ಸದಸ್ಯ ಬ್ಯಾಂಕುಗಳ ಇಂಥ ಸಹಕಾರ ಅಗತ್ಯ.

ಅಗ್ರ ಬ್ಯಾಂಕ್ ತಾನು ಮುಂದಾಳತ್ವ ವಹಿಸಿ ಸಲ್ಲಿಸುವ ಸೇವೆಗಾಗಿ ಸಾಲಗಾರ ಕಂಪನಿಯಿಂದ ಶುಲ್ಕ ಪಡೆಯಬಹುದು. ಇಂಥ ಶುಲ್ಕದ ಮೊತ್ತವನ್ನು ಸದಸ್ಯ ಬ್ಯಾಂಕುಗಳ ಒಪ್ಪಿಗೆಯಿಂದ ಮೊದಲೇ ನಿರ್ಧರಿಸಬೇಕು. ಕಂಪನಿಯಿಂದ ಶುಲ್ಕವನ್ನು ವಸೂಲು ಮಾಡಲಾಗದಿದ್ದರೆ, ಸದಸ್ಯ ಬ್ಯಾಂಕುಗಳು ತಾವು ಕಂಪನಿಗೆ ಒದಗಿಸಲು ಒಪ್ಪಿರುವ ಮಿತಿಗೆ ಅನುಗುಣವಾಗಿ ಆ ನಷ್ಟವನ್ನು ತುಂಬಿಕೊಡಬೇಕಾಗುತ್ತದೆ.

### ಸಹಭಾಗಿತ್ವದ ಅನುಕೂಲತೆಗಳು

ಮೊದಲೇ ವಿವರಿಸಿರುವಂತೆ ನಷ್ಟಸಂಭವವನ್ನು ಹಂಚಿಕೊಳ್ಳುವುದು ಸಹಭಾಗಿತ್ವದ ಪ್ರಮುಖ ಉದ್ದೇಶ. ಸಹಭಾಗಿತ್ವ ಸಾಲನೀಡಿಕೆಯಿಂದ ಈ ಉದ್ದೇಶ ಈಡೇರುವುದಂತೂ ಖಂಡಿತ. ಬೃಹತ್ ಉದ್ಯಮಗಳ ರಾಕ್ಷಸ ಉದರಿದಾಹ ಒಂದೇ ಉದರಿಸಂಸ್ಥೆಯಿಂದ ತೀರಲು ಸಾಧ್ಯವಿಲ್ಲ. ವಿಶ್ವದಾದ್ಯಂತ ಇಂದು ಸಾವಿರಾರು ರಾಷ್ಟ್ರೀಯ ಅಂತರರಾಷ್ಟ್ರೀಯ ಉದ್ಯಮಗಳು ಉದರಿಸಂಸ್ಥೆಗಳ ಸಹಭಾಗಿತ್ವದಿಂದ ನೆರವು ಪಡೆದಿವೆ. ಅಂತರರಾಷ್ಟ್ರೀಯ ಬೃಹತ್ ಉದ್ಯಮಗಳಲ್ಲಂತೂ ಸಹಭಾಗಿತ್ವದ ತತ್ವಕ್ಕೆ ಅಗ್ರಮಾನ್ಯತೆ. ವಿವಿಧ ರಾಷ್ಟ್ರಗಳ ಉದರಿಸಂಸ್ಥೆಗಳು ವಿಶೇಷ ಡ್ರಾಯಿಂಗ್ ಹಕ್ಕುಗಳಲ್ಲಿ (SDRs) ನೀಡುವ ಸಹಭಾಗಿತ್ವ ಉದರಿಯಿಂದ ಅನೇಕ ಯೋಜನೆಗಳು ಕಾರ್ಯರೂಪಕ್ಕೆ ಬಂದಿವೆ. ಸಹಭಾಗಿತ್ವದ ಪರಿಕಲ್ಪನೆ ಇಲ್ಲದಿದ್ದರೆ ಅಂಥ ಯೋಜನೆಗಳನ್ನು ರೂಪಿಸಲು ಕನಸಿನಲ್ಲೂ ಸಾಧ್ಯವಾಗುತ್ತಿರಲಿಲ್ಲ.

### ತೊಡಕುಗಳು

ಸಹಭಾಗಿತ್ವ ಸಾಲನೀಡಿಕೆಯಲ್ಲಿ ಹಲವು ತೊಡಕುಗಳೂ ಉಂಟು. ಅವುಗಳಲ್ಲಿ ಮುಖ್ಯವಾದವು ಮೂರು :

1 ನಿರ್ಧಾರಗಳನ್ನು ಕೈಗೊಳ್ಳುವಲ್ಲಿ ವಿಳಂಬ
2 ಸಾಲಗಾರ ಕಂಪನಿಯಲ್ಲಿ ಬ್ಯಾಂಕು ನಿರೀಕ್ಷಿಸುವ ಶಿಸ್ತು ಇಲ್ಲದಿರುವುದು.
3 ಉದರಿಯ ಮೇಲುಸ್ತುವಾರಿಯಲ್ಲಿನ ಸಮಸ್ಯೆಗಳು.

1 ಹಲವಾರು ಬ್ಯಾಂಕುಗಳು ಸೇರಿ ನಿರ್ಣಯಗಳನ್ನು ಕೈಗೊಳ್ಳಬೇಕಾದುದರಿಂದ ಸ್ವಲ್ಪಮಟ್ಟಿನ ವಿಳಂಬ ಅನಿವಾರ್ಯ. ಆದರೆ ಹಲವು ಸಂದರ್ಭಗಳಲ್ಲಿ ಈ ವಿಳಂಬ ಕಂಪನಿಯ ಉತ್ಪಾದನೆ ನಿರೀಕ್ಷಿತ ಗತಿಯಲ್ಲಿ ಮುಂದುವರಿಯಲು ಅಡ್ಡಿಯಾಗುತ್ತದೆ.

2 ಸಾಲ ಪಡೆದವರಿಂದ ಬ್ಯಾಂಕು ಒಂದು ರೀತಿಯ ಆರ್ಥಿಕ ಶಿಸ್ತನ್ನು ನಿರೀಕ್ಷಿಸುವುದು ಎಷ್ಟು ಸಾಮಾನ್ಯವೋ ಅಂತಹ ಶಿಸ್ತನ್ನು ಸಾಲಗಾರರು ತೋರದಿರುವುದೂ ಅಷ್ಟೇ ಸಾಮಾನ್ಯ. ಇದು ಮುಂಗಡಗಳನ್ನು ನಿರ್ವಹಿಸುವ ಬ್ಯಾಂಕರರೆಲ್ಲರೂ ಬಲ್ಲ ಸತ್ಯ. ಆದರೆ ಸಹಭಾಗಿತ್ವ ಸಾಲನೀಡಿಕೆಯಲ್ಲಿ ಸಾಲಗಾರ ಕಂಪನಿಯು ಅಶಿಸ್ತು ಪುಟಗೊಳ್ಳಲು ಅವಕಾಶ ಹೆಚ್ಚು. ಕಂಪನಿಯು ಹಲವು ಬ್ಯಾಂಕುಗಳಲ್ಲಿ ಖಾತೆ ಹೊಂದಿರುವುದರಿಂದ ಅದರ ಖಾತೆಯಲ್ಲಿನ ವಹಿವಾಟುಗಳ ಮೇಲೆ ನಿಗಾ ಇಡುವುದು ಬ್ಯಾಂಕುಗಳಿಗೆ ಬಲು ಕಷ್ಟ. ಅನೇಕ ಬಾರಿ ಸಾಲಗಾರ ಕಂಪನಿಯು ಈ ಪರಿಸ್ಥಿತಿಯನ್ನು ದುರುಪಯೋಗಿಸಿಕೊಳ್ಳುತ್ತದೆ.

3 ಉದರಿ ನಿಯಂತ್ರಣದ ಜವಾಬ್ದಾರಿ ಎಲ್ಲ ಬ್ಯಾಂಕುಗಳ ಮೇಲೆ ಇದ್ದರೂ, ಒಂದು ನಿರ್ದಿಷ್ಟ ದಿನಾಂಕದಂದು ಸಾಲಗಾರ ಕಂಪನಿಯ ಒಟ್ಟು ಹೊಣೆ (ಸಹಭಾಗಿತ್ವ ಸಾಲಕ್ಕೆ ಸಂಬಂಧಿಸಿದಂತೆ) ಎಷ್ಟೆಂಬುದನ್ನು ತಕ್ಷಣ ತಿಳಿದುಕೊಳ್ಳುವುದು ಸಾಧ್ಯವಾಗುವುದಿಲ್ಲ.ಇದರಿಂದಾಗಿ ಉದರಿನಿಯಂತ್ರಣ

ಕಠಿಣವಾಗುತ್ತದೆ. ತಿಂಗಳಿಗೊಮ್ಮೆ ಎಲ್ಲವನ್ನೂ ಒಟ್ಟಿಗೆ ತೆರೆದಿಟ್ಟು ನೋಡಬಹುದಾದರೂ ಆ ವೇಳೆಗೆ ಕಾಲ ಮಿಂಚಿರುತ್ತದೆ.

### ಅಂತರರಾಷ್ಟ್ರೀಯ ಆರ್ಥಿಕ ರಂಗದಲ್ಲಿ

ಒಂದು ದಶಕದ ಹಿಂದೆ ಅನೇಕ ಅಂತರರಾಷ್ಟ್ರೀಯ ಬ್ಯಾಂಕುಗಳಲ್ಲಿ ಸಹಭಾಗಿತ್ವ ಬ್ಯಾಂಕಿಂಗ್ ಒಂದು ಫ್ಯಾಶನ್ ಎನಿಸಿತ್ತು. ಬೇರೆ ಬೇರೆ ದೇಶಗಳಲ್ಲಿನ, ಬೇರೆ ಬೇರೆ ಕ್ಷೇತ್ರಗಳಲ್ಲಿ ಪರಿಣತಿಹೊಂದಿದ ಬ್ಯಾಂಕುಗಳು ಸಹಭಾಗಿತ್ವ ನಡೆಸುವುದು ತೀರ ಸಾಮಾನ್ಯವಾಗಿದ್ದು ಲಂಡನ್ ನಗರವು ಸಹಭಾಗಿತ್ವ ಬ್ಯಾಂಕಿಂಗಿನ ಅತ್ಯಂತ ಜನಪ್ರಿಯ ಕೇಂದ್ರವಾಗಿತ್ತು. ಸ್ವಲ್ಪಕಾಲ ಇದೆಲ್ಲ ಚೆನ್ನಾಗಿಯೇ ನಡೆಯಿತಾದರೂ ಇತ್ತೀಚಿನ ವರ್ಷಗಳಲ್ಲಿ ಪರಿಸ್ಥಿತಿ ಬದಲಾಗಿದೆ. ಸಹಭಾಗಿತ್ವದ ಆರಂಭದಲ್ಲಿ ಹಲವಾರು ಬ್ಯಾಂಕುಗಳು ಭಾಗವಹಿಸಿದರೂ ಕ್ರಮೇಣ ಅವುಗಳಲ್ಲೊಂದು ಉಳಿದ ಬ್ಯಾಂಕುಗಳ ಭಾಗವನ್ನು ಅವುಗಳಿಗೆ ವಾಪಸುಮಾಡಿ ಒಟ್ಟು ಸಾಲವನ್ನು ತಾನೇ ಸ್ವತಂತ್ರವಾಗಿ ನಿರ್ವಹಿಸುವಂತಾಯಿತು. ಒದಗಿಬಂದ ಅನುಭವದ ಮೂಲಕ ಉಂಟಾದ ಆತ್ಮವಿಶ್ವಾಸದಿಂದ ಅನೇಕ ಬ್ಯಾಂಕುಗಳು ಹೀಗೆ ಮಾಡಿರಲು ಸಾಧ್ಯ. ಆದರೆ ಉದರಿಯನ್ನು ಹೆಚ್ಚು ಪರಿಣಾಮಕಾರಿಯಾಗಿ ನಿಯಂತ್ರಿಸಲು ಇಂಥ ಕ್ರಮ ಅಗತ್ಯವೂ ಆಗಬಹುದು ಎಂಬುದನ್ನು ಮರೆಯುವಂತಿಲ್ಲ. ಅಂತರರಾಷ್ಟ್ರೀಯ ಆರ್ಥಿಕ ರಂಗದಲ್ಲಿ ಸಹಭಾಗಿತ್ವ ಬ್ಯಾಂಕುಗಳ ಅತ್ಯುತ್ತಮ ದಿನಗಳು ಕಳೆದುಹೋದುವು ಎಂಬ ಭಾವನೆಯುಂಟಾಗಿದೆ.

### ಭಾರತದಲ್ಲಿ

ಸಹಭಾಗಿತ್ವ ಬ್ಯಾಂಕಿಂಗಿನಲ್ಲಿ ತೊಡಕುಗಳಿವೆಯೆಂಬುದನ್ನು ಅಲ್ಲಗಳೆಯಲಾಗುವುದಿಲ್ಲವೆಂಬುದು ನಿಜ. ಆದರೆ ಇಂಥ ತೊಡಕುಗಳನ್ನು ನಿವಾರಿಸುವ ಬಗ್ಗೆ ಯೋಚಿಸಲೇಬೇಕಷ್ಟೆ? ಭಾಗವಹಿಸುವ ಬ್ಯಾಂಕುಗಳ ಸಕಾಲಿಕ ಸಲಹೆಗಳು, ಸಕ್ರಿಯ ಸಹಕಾರ ಸಹಭಾಗಿತ್ವಕ್ಕೆ ಅತ್ಯಂತ ಅಗತ್ಯವಾದುದು. ಜತೆಗೆ ಅಗ್ರ ಬ್ಯಾಂಕಿನ ಮುಂದಾಳತ್ವ, ಜಾಣ್ಮೆಗಳು ಕೆಲಸ ಮಾಡಿದರೆ ಸಮಸ್ಯೆಗಳ ತೀವ್ರತೆ ಬಹುಮಟ್ಟಿಗೆ ಕಡಮೆಯಾಗುತ್ತದೆ.

ಭಾರತದಲ್ಲಿ ಸಾರ್ವಜನಿಕ ಹಾಗೂ ಖಾಸಗಿ ಉದ್ಯಮ ಘಟಕಗಳಿಗೆ ನೀಡುವ ಸಾಲಗಳನ್ನು ಹಂಚಿಕೊಳ್ಳುವುದನ್ನು ಕುರಿತು ಶಿಫಾರಸು ಮಾಡಲು 1973ರಲ್ಲಿ ಒಂದು ಅಧ್ಯಯನ ತಂಡವನ್ನು ನೇಮಿಸಲಾಯಿತು. ತಂಡದ ಶಿಫಾರಸುಗಳನ್ನು ರಿಸರ್ವ್ ಬ್ಯಾಂಕ್ ಒಪ್ಪಿ ಬ್ಯಾಂಕುಗಳಿಗೆ ಹಲವು ಸಲಹೆಗಳನ್ನು ನೀಡಿತು.

ಬ್ಯಾಂಕೊಂದು ಸಾರ್ವಜನಿಕ ಅಥವಾ ಖಾಸಗಿ ಕ್ಷೇತ್ರದ ಘಟಕವೊಂದಕ್ಕೆ ತನ್ನ ಠೇವಣಿಯ ಶೇ. 1.5ಕ್ಕಿಂತ ಹೆಚ್ಚಿನ ಮೊತ್ತದ ಉದರಿಯನ್ನು ನೀಡಬೇಕಾದಲ್ಲಿ ಸಹಭಾಗಿತ್ವ ಅಥವಾ ಭಾಗೀದಾರಿಕೆ ವಿಧಾನವನ್ನು ಅನುಸರಿಸಬೇಕು ಎಂಬುದು ಆ ಸಲಹೆಗಳಲ್ಲಿ ಒಂದು. ತಮ್ಮ ಹಾಲಿ ಮುಂಗಡಗಳನ್ನು ಈ ದೃಷ್ಟಿಯಿಂದ ಮರುಪರಿಶೀಲಿಸಿ ಅಗತ್ಯವಿದ್ದೆಡೆ ಸಹಭಾಗಿತ್ವ ವ್ಯವಸ್ಥೆ ಮಾಡಿಕೊಳ್ಳಬೇಕೆಂಬುದು ರಿಸರ್ವ್ ಬ್ಯಾಂಕಿನ ಆಶಯ.

ಸಹಭಾಗಿತ್ವ ವ್ಯವಸ್ಥೆಯಿಲ್ಲದೆ ಹಲವು ಬ್ಯಾಂಕುಗಳು ಸೇರಿ ಉದ್ಯಮ ಘಟಕವೊಂದರ ಉದರಿ ಅಗತ್ಯವನ್ನು ಪೂರೈಸುವೆಡೆಗಳಲ್ಲಿ ಈ ಮುಂದಿನ ಸಲಹೆಗಳನ್ನು ಪಾಲಿಸಬೇಕೆಂದು ರಿಸರ್ವ್ ಬ್ಯಾಂಕು ಸೂಚಿಸಿದೆ :

1 ನಿಯತಕಾಲಿಕವಾಗಿ ಮಾಹಿತಿಯ ವಿನಿಮಯ ಮಾಡಿಕೊಳ್ಳಬೇಕು.
2 ನೆರವು ನೀಡಿರುವ ಸಂಸ್ಥೆಗಳ ಸಭೆಯಲ್ಲಿ ಸಾಲಪಡೆದ ಘಟಕದ ಕಾರ್ಯವೈಖರಿಯನ್ನು ಪರಾಮರ್ಶಿಸಬೇಕು.
3 ಉದರಿಯ ಮೊತ್ತವನ್ನು ಏರಿಸಬೇಕಾದಾಗ, ಉದರಿಯನ್ನು ನವೀಕರಿಸಬೇಕಾದಾಗ ಅಥವಾ ಘಟಕವು ಅಧಃಪತನ ಹೊಂದುತ್ತಿರುವ ಸೂಚನೆಗಳು ಕಂಡುಬಂದಾಗ ಉದರಿ ಅಗತ್ಯಗಳನ್ನು ಜಂಟಿಯಾಗಿ ಪರಾಮರ್ಶೆ ಮಾಡಬೇಕು.

ಅಂತರರಾಷ್ಟ್ರೀಯ ಆರ್ಥಿಕರಂಗದ ವಿದ್ಯಮಾನಗಳು ಹೇಗೇ ಇರಲಿ, ಭಾರತದಲ್ಲಂತೂ ಸಹಭಾಗಿತ್ವ ಬ್ಯಾಂಕಿಂಗ್ ಇನ್ನೂ ಬೆಳೆಯಬೇಕಾಗಿದೆ ಎಂದು ಈ ಸಲಹೆಗಳಿಂದ ತಿಳಿದುಬರುತ್ತದೆ.

---

ಬರ್ನಾರ್ಡ್ ಶಾ ಅನೇಕರಿಗೆ (ಹಾಲಿನವ, ದಿನಸಿ ಅಂಗಡಿಯವ ಇತ್ಯಾದಿ) ನೀಡಿದ ಚೆಕ್‌ಗಳು ಪಾವತಿಗಾಗಿ ಬ್ಯಾಂಕಿಗೆ ಬರುತ್ತಲೇ ಇರಲಿಲ್ಲವಂತೆ! ಹಸ್ತಾಕ್ಷರ ಸಂಗ್ರಹಕಾರರು ಚೆಕ್ಕಿನಲ್ಲಿ ನಮೂದಿತವಾದ ಮೊಬಲಗಿಗಿಂತ ಹೆಚ್ಚು ಹಣ ಕೊಟ್ಟು ಆ ಚೆಕ್ಕುಗಳನ್ನು ಕೊಳ್ಳುತ್ತಿದ್ದರಂತೆ.

—ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

# ಎಲ್ಲ ಜ್ಞಾನಕ್ಕೂ ಮೂಲ ಅಕ್ಷರಜ್ಞಾನ

## ಕಡ್ಡಾಯವಾಗಿ ಅಕ್ಷರ ಕಲಿಯಿರಿ

ಅಭಿವೃದ್ಧಿಯ ಹಾದಿಯಲ್ಲಿ ಅನಕ್ಷರತೆ ಒಂದು ದೊಡ್ಡ ಆತಂಕ. ಇದನ್ನು ತೊಡೆದುಹಾಕಲು ಸರ್ಕಾರ ಎರಡು ರೀತಿಯಲ್ಲಿ ಪ್ರಯತ್ನಿಸುತ್ತಿದೆ:

(1) ಕಡ್ಡಾಯ ಪ್ರಾಥಮಿಕ ಶಿಕ್ಷಣ

(2) ವಯಸ್ಕರ ಶಿಕ್ಷಣ

- ಈಗ ರಾಜ್ಯದ ಪ್ರತಿ ಹಳ್ಳಿಯಲ್ಲೂ ಪ್ರಾಥಮಿಕ ಶಾಲಾ ಸೌಲಭ್ಯವಿದೆ. ಐದು ವರ್ಷ ಹತ್ತು ತಿಂಗಳು ತುಂಬಿದ ಮಕ್ಕಳನ್ನು ತಪ್ಪದೆ ಶಾಲೆಗೆ ಕಳುಹಿಸುವುದು **ಪೋಷಕರ** ಪ್ರಥಮ ಕರ್ತವ್ಯ.

- ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದ 18 ವರ್ಷದಿಂದ 40 ವರ್ಷದೊಳಗಿನ ವಯಸ್ಕರಿಗೆ ಅಕ್ಷರ ಮತ್ತು ವೃತ್ತಿಜ್ಞಾನ ನೀಡಲು ವಯಸ್ಕರ ಶಿಕ್ಷಣ ಸೌಲಭ್ಯವಿದೆ. ಈ ಸೌಲಭ್ಯ ಪಡೆಯಲು ತಾಲ್ಲೂಕಿನ ವಯಸ್ಕರ ಶಿಕ್ಷಣ ಕಾರ್ಯಕರ್ತರು ಅಥವಾ ಸಹಾಯಕ ಶಿಕ್ಷಣಾಧಿಕಾರಿಗಳನ್ನು ಭೇಟಿ ಮಾಡಿ.

**ಮಾನವನ ಬದುಕಿಗೆ ಅಕ್ಷರಜ್ಞಾನ ಅತ್ಯಂತ ಅಗತ್ಯ**
**ಅದನ್ನು ತಪ್ಪದೆ ಸಂಪಾದಿಸಿಕೊಳ್ಳಿ**

ಪ್ರಕಟಣೆ
ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ
ಬೆಂಗಳೂರು

# ಸಾಮಾಜಿಕ ಬ್ಯಾಂಕಿಂಗ್*: ಕುದುರೆಯ ಮುಂದೆ ಬಂಡಿ

---

ಮೂಲ: ಡಿ. ವಿ. ರಮಣ ಮೂರ್ತಿ

1982 ಅಕ್ಟೋಬರ್ 10 ರಿಂದ 12ರ ವರೆಗೆ ವಾಲ್ಟೇರ್‌ನಲ್ಲಿ ಆಂಧ್ರ ವಿಶ್ವವಿದ್ಯಾಲಯದ ವಾಣಿಜ್ಯಶಾಸ್ತ್ರ ವಿಭಾಗದಲ್ಲಿ ಸಾಮಾಜಿಕ ಬ್ಯಾಂಕಿಂಗ್ ಬಗ್ಗೆ ವಿಶ್ವವಿದ್ಯಾಲಯ ಅನುದಾನ ಆಯೋಗದ ವಿಚಾರಸಂಕಿರಣದಲ್ಲಿ ಮಂಡಿಸಲಾದ ಸಂಪ್ರಬಂಧ

ಅನುವಾದ : **ಬೆಂ. ಶ್ರೀ. ರವೀಂದ್ರ, ಹು.ವಾ. ಶ್ರೀಪ್ರಕಾಶ, ಕೆ.ಎನ್. ಮಹಾಬಲ, ಬಿ.ವಿ. ಚಂದ್ರಮೌಳಿ, ಜಿ.ಎನ್. ನರಸಿಂಹಮೂರ್ತಿ ಮೋ.ಕೃ. ಅನಂತಸ್ವಾಮಿ, ಅ.ಚ.ಅಶೋಕ ಕುಮಾರ**

ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಬ್ಯಾಂಕಿಂಗ್ ಒಂದು ಚೈತನ್ಯಯುಕ್ತ ಸಾಧನವಾಗಿದೆ. ರಾಷ್ಟ್ರೀಕರಣದ ತನಕ ಬ್ಯಾಂಕಿಂಗ್ ಉದ್ಯಮದಲ್ಲಿ ಬ್ಯಾಂಕಿಂಗ್ ಬೆಳವಣಿಗೆಯ ಗತಿ-ವ್ಯವಹಾರ ಮತ್ತು ಶಾಖಾ ವಿಸ್ತರಣೆ ಎರಡೂ ವಿಷಯಗಳ ದೃಷ್ಟಿಯಿಂದ – ಕಡಿಮೆಯದೆಂದು ಪರಿಗಣಿತವಾಗಿತ್ತು. ಬ್ಯಾಂಕುಗಳ ರಾಷ್ಟ್ರೀಕರಣದ ನಂತರ ಈ ವಲಯವು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಉದ್ಯುಕ್ತವಾಯಿತು. ಬ್ಯಾಂಕಿಂಗ್ ಉದ್ಯಮದಲ್ಲಿ ಸಂಭವಿಸಿರುವ ಬದಲಾವಣೆಗಳಿಗೆ ಪರಿಮಾಣಾತ್ಮಕ ಹಾಗೂ ಗುಣಾತ್ಮಕವಾದ ಎರಡೂ ಆಯಾಮಗಳಿವೆ. (ಗಾತ್ರ, ವೈವಿಧ್ಯ ಹಾಗೂ ಭೌಗೋಳಿಕ ವ್ಯಾಪನ ಇವನ್ನು ಕುರಿತಂತೆ ಚಟುವಟಿಕೆಗಳು ಹಲವು ಪಟ್ಟು ಬೆಳೆದಿದೆ. ರಾಷ್ಟ್ರೀಯ ಅಭಿವೃದ್ಧಿಯ ಅಗತ್ಯಕ್ಕೆ ಇವು ಮೂರೂ ಸಂಬಂಧಿಸಿದಂಥವು). 1969ರಲ್ಲಿ 14 ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣದ ಅನಂತರ ಭಾರತದಲ್ಲಿ ಬ್ಯಾಂಕಿಂಗ್ ಉದ್ಯಮ ಸಾಧಿಸಿರುವ ಪ್ರಗತಿ ಎಂದರೆ ಅರೆನಗರ ಮತ್ತು ಗ್ರಾಮೀಣ ಪ್ರದೇಶಗಳಿಗೆ ಪ್ರವೇಶ, ಉದರಿಯನ್ನು ತೊಡಗಿಸುವುದರಲ್ಲಿ ಸಂರಚನೆಯ ಪರಿವರ್ತನೆ ಮತ್ತು ಸಂಪನ್ಮೂಲಗಳ ಕ್ರೋಢೀಕರಣ. ಇವು ಗಮನಾರ್ಹವಾದುವೇ ಸರಿ. ಬ್ಯಾಂಕಿಂಗ್ ತನ್ನ ಮುಂಚಿನ ನಗರೀಯ ಸಂಭಾವಿತತನವನ್ನು ಕಳಚಿಕೊಂಡು ಆರ್ಥಿಕ ಬೆಳವಣಿಗೆಯ ಹಾಗೂ ವಿತರಣೆಯ ನ್ಯಾಯದ ಒಂದು ವೀರ್ಯವತ್ತಾದ ಸಾಧನವಾಗಿ ಹೊಮ್ಮುತ್ತಿದೆ. ಭಾರತೀಯ ಬ್ಯಾಂಕಿಂಗು ಅಭಿಜಾತ ಬ್ಯಾಂಕಿಂಗ್‌ನಿಂದ ಸಾಮೂಹಿಕ ಬ್ಯಾಂಕಿಂಗ್‌ಗೆ ಬದಲಾಗುತ್ತಿದೆ. ಇದು ಬೆಳವಣಿಗೆ ಹಾಗೂ ಉತ್ಕೃಷ್ಟತೆಯ ತಿರುಳು.

ಗ್ರಾಮೀಣ ಉದರಿ ಕ್ಷೇತ್ರದಲ್ಲಿ ಮಾದರಿ ಸಂಸ್ಥೆಯೊಂದಕ್ಕಾಗಿ ಅನ್ವೇಷಣೆ ಹೊಸದಲ್ಲ. 1945ರಷ್ಟು ಹಿಂದೆಯೇ ಎಂದರೆ ದುರ್ಬಲ ಸಹಕಾರ ಸಂಸ್ಥೆಗಳಿಗೆ ಒದಗಿಸುವುದಕ್ಕೆ ಕೃಷಿ ಉದರಿ ನಿಗಮಗಳನ್ನು ರಚಿಸಬೇಕೆಂದು ಗಾಡ್ಗೀಳ ಸಮಿತಿ ಶಿಫಾರಸ್ಸು ಮಾಡಿದಾಗಲೇ ಈ ಅನ್ವೇಷಣೆ ಆರಂಭವಾಯಿತು. 1950ರಲ್ಲಿ ಗ್ರಾಮೀಣ ಬ್ಯಾಂಕಿಂಗ್ ವಿಚಾರಣಾ ಸಮಿತಿಯು ಗ್ರಾಮೀಣ ಉದರಿ ಕ್ಷೇತ್ರದಲ್ಲಿ ಸಹಕಾರಿ ಸಂರಚನೆಗೆ ಪ್ರಧಾನ ಪಾತ್ರವನ್ನು ಮತ್ತು ವಾಣಿಜ್ಯ

---

* Social Banking: Cart Before the Horse: D. V. Ramana Murthy, *The Journal of the Indian Institute of Bankers*, Vol. 53, No. 3, July-Sept. 1982

ಬ್ಯಾಂಕಿಂಗ್ ಅನುಬಂಧಿ ಪಾತ್ರವನ್ನು ನಿಯೋಜಿಸಿತು. ಗ್ರಾಮೀಣ ಉದರಿ ಸಮಸ್ಯೆಗಳನ್ನು ಪರಿಹರಿಸಲು ವಾಣಿಜ್ಯ ಬ್ಯಾಂಕಿಂಗ್ ವ್ಯವಸ್ಥೆಯ ಪುನರ್ರಚನೆಯ ಸಲಹೆ ನೀಡಿತು. ಸಹಕಾರಿ ಸಂಘಗಳ ಗ್ರಾಮೀಣ ಉದರಿಯನ್ನು ವಾಣಿಜ್ಯ ಬ್ಯಾಂಕುಗಳು ಪೂರೈಸಬೇಕೆಂದು ಅಖಿಲಭಾರತ ಗ್ರಾಮೀಣ ಉದರಿ ವಿಮರ್ಶಾ ಸಮಿತಿ 1969ರಲ್ಲಿ ತೀರ್ಮಾನಿಸಿತು. 1972ರಲ್ಲಿ ಬ್ಯಾಂಕಿಂಗ್ ಆಯೋಗ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಗಾಗಿ ಶಿಫಾರಸ್ಸು ಮಾಡಿತು. ಆಯೋಗ ಸಲಹೆ ಮಾಡಿದ ಎರಡು ರೀತಿಯ ಗ್ರಾಮೀಣ ಬ್ಯಾಂಕುಗಳೆಂದರೆ:

1 ಭಾರತೀಯ ರಿಸರ್ವ್ ಬ್ಯಾಂಕಿನಿಂದ ಅಥವಾ ಕೂಡು ಬಂಡವಾಳ ಕಂಪನಿಗಳ ನೋಂದಣಿ ಅಧಿಕಾರಿಯವರಿಂದ ನೋಂದಾಯಿಸಲ್ಪಟ್ಟ ಸಹವರ್ತಿ ಗ್ರಾಮೀಣ ಬ್ಯಾಂಕು (ವಾಣಿಜ್ಯ ಬ್ಯಾಂಕೊಂದರ ಅಧೀನ ಸಂಸ್ಥೆ) ಮತ್ತು
2 ರಾಜ್ಯ ಸಹಕಾರಿ ಕಾನೂನುಗಳ ಅಡಿಯಲ್ಲಿ ನೋಂದಾಯಿತವಾದ ಗ್ರಾಮೀಣ ಸಹಕಾರಿ ಬ್ಯಾಂಕ್.

ನಂತರ ಕೇಂದ್ರ ಹಣಕಾಸು ಮಂತ್ರಿಯವರ ಅಧಿಕ ಕಾರ್ಯದರ್ಶಿಯಾದ ಶ್ರೀ ನರಸಿಂಹನ್‌ರವರ ನೇತೃತ್ವದಲ್ಲಿ ಕಾರ್ಯತಂಡವೊಂದು ಗ್ರಾಮೀಣ ಬ್ಯಾಂಕುಗಳ ಸಮಸ್ಯೆಯ ಆಳವಾದ ಅಧ್ಯಯನ ಮಾಡಲು ಮತ್ತು ಗ್ರಾಮೀಣ ಉದ್ರಿಗಳಿಗೆ ಸೂಕ್ತ ಕಾರ್ಯಕ್ರಮ ರೂಪಿಸಲು ರಚಿಸಲ್ಪಟ್ಟಿತು. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಯಾಗಬೇಕೆಂದು ಆ ತಂಡ ಶಿಫಾರಸು ಮಾಡಿತು.

### ಪ್ರಗತಿ : ಸಂಖ್ಯಾರೂಪರೇಷೆ

ವಾಣಿಜ್ಯ ಬ್ಯಾಂಕುಗಳ ಶಾಖಾ ವಿಸ್ತರಣ ಕಾರ್ಯಕ್ರಮ ವಿಶೇಷವಾಗಿ ರಾಷ್ಟ್ರೀಕರಣದ ನಂತರ ಗ್ರಾಮೀಣ ಒಲವು ತಾಳಿದೆ. 1970ರ ಜೂನ್‌ಗೆ ಅಂತ್ಯವಾಗುವ ವರ್ಷದಲ್ಲಿ ತೆರೆಯಲಾದ 1,869 ಶಾಖೆಗಳ ಪೈಕಿ 1,230 ಅಥವಾ ಶೇ. 66ರಷ್ಟು ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿದ್ದವು. 1980ರ ಜೂನ್‌ಗೆ ಅಂತ್ಯವಾಗುವ ವರ್ಷದಲ್ಲಿ ತೆರೆಯಲಾದ 2,217 ಹೊಸ ಶಾಖೆಗಳ ಪೈಕಿ 1,768 ಅಥವಾ ಶೇ. 80ರಷ್ಟು ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿದ್ದವು. ಹೀಗೆ 70ರ ದಶಕದಲ್ಲಿ ಗ್ರಾಮೀಣ ಪ್ರದೇಶದಲ್ಲಿ ತೆರೆಯಲಾದ ಹೊಸ ಶಾಖೆಗಳ ಶೇಕಡಾ ಪ್ರಮಾಣ 66ರಿಂದ 80ಕ್ಕೆ ಹೆಚ್ಚಿತು. ಇದು ಗ್ರಾಮೀಣ ಅನುಸ್ಥಾಪನೆಗೆ ಒತ್ತು ನೀಡಿದ್ದರ ಫಲ. ಗ್ರಾಮೀಣ ಜನಸಮೂಹಕ್ಕೆ ಸಂಬಂಧಿಸಿದಂತೆ ಉದರಿ ಠೇವಣಿ ಅನುಪಾತ 1969ರ ಜೂನ್ ಅಂತ್ಯದಲ್ಲಿ ಶೇ. 37.2 ಇದ್ದದ್ದು 1982ರ ಮಾರ್ಚ್ ಅಂತ್ಯಕ್ಕೆ ಶೇ. 57.2ಕ್ಕೆ ಏರಿದೆ. ಸ್ಥೂಲ ಬ್ಯಾಂಕ್ ಉದರಿಯನ್ನು ವಲಯಾನುಗುಣವಾಗಿ ತೊಡಗಿಸುವ ಕಾರ್ಯದಲ್ಲಿ ಆದ್ಯತಾ ವಲಯಗಳ ಪರವಾಗಿ ವಾಲಿತು. 1969ರ ಜೂನ್‌ನಲ್ಲಿ ಪ್ರತಿ ಬ್ಯಾಂಕ್ ಕಛೇರಿಗೆ ಸರಾಸರಿ ಜನಸಂಖ್ಯೆ 65,000 ಇದ್ದದ್ದು 1980ರ ಜೂನ್ ವೇಳೆಗೆ 17,000ಕ್ಕೆ ಇಳಿಯಿತು. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸಾಧನೆಯೂ ಗಮನಾರ್ಹವಾಗಿದೆ.

ಬ್ಯಾಂಕಿಂಗ್ ಗ್ರಾಮೀಣೀಕರಣದ ಹಿಂದೆಯೇ ಹಲವಾರು ಸಮಸ್ಯೆಗಳ ಸಮೂಹವೇ ಬಂತು. ಉದಾಹರಣೆಗೆ: (1) ಯೋಗ್ಯ ಆವರಣಗಳ ಅಭಾವ, (2) ಭದ್ರತೆಯ ಅಭಾವ, (3) ಗ್ರಾಮೀಣ ಅನುಸ್ಥಾಪಿತ ಸಿಬ್ಬಂದಿಯ ಅಭಾವ, (4) ಪರಿಣಾಮಕಾರಿ ತರಬೇತಿ ಕಾರ್ಯಕ್ರಮಗಳ ಅಭಾವ, (5) ಸಂಪರ್ಕ ಅಂತರದ ಸಮಸ್ಯೆಗಳು, (6) ಗ್ರಾಮೀಣ ಶಾಖೆಗಳ ಸಿಬ್ಬಂದಿ ನಿರ್ವಹಣೆಯ ವೆಚ್ಚ ಹಾಗೂ ಕಡಿಮೆ ಲಾಭಪ್ರದತೆಯ ಸಮಸ್ಯೆಗಳು. "ಗ್ರಾಮೀಣ ಬ್ಯಾಂಕುಗಳ ಶಾಖೆಗಳನ್ನು ಭಾರೀ ಸಂಖ್ಯೆಯಲ್ಲಿ ತೆರೆಯುವುದರಿಂದ ಉದ್ಭವಿಸುವ ಹೆಚ್ಚುವರಿ ಭಾರದಿಂದಾಗಿ ಮುಂಗಾಣದ ಸನ್ನಿವೇಶಗಳನ್ನು ಎದುರಿಸುವಲ್ಲಿ ಬ್ಯಾಂಕುಗಳ ಸ್ಥಿತಿಸ್ಥಾಪಕ ಶಕ್ತಿ ಹಾಗೂ ಜೀವನ ಸಾಮರ್ಥ್ಯಗಳು ತೀವ್ರವಾಗಿ ಕುಂಠಿತವಾಗುತ್ತದೆ." ಹಾಗೆಂದು ಸರಿಯಾಗಿಯೇ ಎಚ್ಚರಿಸಿದ ವರದಿಯನ್ನು ಪರಿಶೀಲಿಸುವುದು ಯಥೋಚಿತವಾಗಿದೆ. ಅಗತ್ಯವಾದದ್ದೆಂದರೆ ಬ್ಯಾಂಕಿಂಗ್ ಸೌಲಭ್ಯಗಳನ್ನು ಗ್ರಾಮೀಣ ಪ್ರದೇಶಗಳಿಗೆ ವಿಸ್ತರಿಸುವುದರ ಅನಿವಾರ್ಯ ಅಗತ್ಯ ಹಾಗೂ ಬ್ಯಾಂಕುಗಳ ಜೀವನ ಸಾಮರ್ಥ್ಯವನ್ನು ಉಳಿಸಿಕೊಳ್ಳುವುದರ ವಿವೇಚನಾಯುತ ಸೂಕ್ತತೆ ಇವುಗಳ ನಡುವೆ ಕಾರಣಯುತವಾದ ಸಮತೋಲವನ್ನು ಸಾಧಿಸುವುದೇ ಆಗಿದೆ. ಈಚಿನ ವರ್ಷಗಳಲ್ಲಿ ತೆರೆಯಲಾದ ಶಾಖೆಗಳ ಪೈಕಿ ಹೆಚ್ಚಿನ ಸಂಖ್ಯೆಯವು ತಮ್ಮ ಗುರಿಗಳನ್ನು ಸಾಧಿಸುವಲ್ಲಿ ಹಿಂದೆ ಬೀಳುತ್ತಿವೆ. ಇದಕ್ಕೆ ಮುಖ್ಯ ಕಾರಣವೆಂದರೆ ಆರಂಭಿಕ ಹಂತಗಳಲ್ಲಿ ಯುಕ್ತವಾದ ಎಚ್ಚರಿಕೆ ಹಾಗೂ ಗಮನವನ್ನು ಹರಿಸದಿರುವುದೇ ಆಗಿದೆ. ಒಂದು ಶಾಖೆ ಆದರಲ್ಲೂ ಗ್ರಾಮೀಣ ಪ್ರದೇಶದ ಶಾಖೆ ಜೀವನ ಸಾಮರ್ಥ್ಯವನ್ನು ಪಡೆದುಕೊಳ್ಳಲು ಐದರಿಂದ ಆರು ವರ್ಷಗಳ ಅವಧಿ ಬೇಕೆಂದು ಅಂದಾಜು ಮಾಡಲಾಗಿದೆ.

ಬ್ಯಾಂಕುಗಳು ಶಾಖಾ ಸ್ಥಾಪನ ಸನ್ನಿವೇಶದ ಖಚಿತ ತಂತ್ರವೊಂದನ್ನು ಹೊಂದಿರಬೇಕಾಗುತ್ತದೆ. ಈ ತಂತ್ರದ ಮುಖ್ಯ ಅಂಶಗಳು ಯಾವುವೆಂದರೆ:

1 ಕಾರ್ಯಾಚರಣೆಯ ಕ್ಷೇತ್ರ ಮತ್ತು ಆ ಕ್ಷೇತ್ರದಲ್ಲಿ ತೆರೆಯಲಿರುವ ಶಾಖೆಗಳ ಸಂಖ್ಯೆಯ ನಿರ್ಣಯ–ಶಾಖೆಯೊಂದರ ಸೇವೆಗೆ ಒಳಪಡುವ ಕ್ಷೇತ್ರಗಳು ಹಾಗೂ ಅವುಗಳ ಜನಸಂಖ್ಯೆ ಇವು ನಿಗದಿತಗೊಳ್ಳಬೇಕು.
2 ಜನಸಂಖ್ಯೆ (ನಗರೀಯ/ದುಡಿಯುವ ಜನಸಂಖ್ಯೆ), ಸಾಕ್ಷರತಾ ಅನುಪಾತ, ಕೃಷಿ ಕಾರ್ಮಿಕರು ಇತ್ಯಾದಿ ಅಂಶಗಳಿಗೆ ಸಂಬಂಧಿಸಿದಂತೆ ಠೇವಣಿಯ ಭವ ಸಾಮರ್ಥ್ಯವನ್ನು ಗೊತ್ತುಪಡಿಸಿಕೊಳ್ಳಬೇಕು.
3 ಸಾಗುವಳಿಯಾದ ಜಮೀನು, ಫಸಲಿನ ಸಂಖ್ಯೆ, ನೀರಾವರಿಯ ಸೌಲಭ್ಯಗಳು, ಅಧೋರಚನೆ, ಇರಬಹುದಾದ

ಸಣ್ಣ ಕೈಗಾರಿಕೆಗಳು, ಮಾರುಕಟ್ಟೆ ಸೌಲಭ್ಯಗಳು, ದುಡಿಯುವ ಜನಸಂಖ್ಯೆಯ ಶೇಕಡಾವಾರು, ಇಂಥ ಆರ್ಥಿಕ ಚಲಗಳನ್ನು ಪರಿಗಣಿಸಿ ಪ್ರಕೃತ ಕ್ಷೇತ್ರದ ಉದರಿ ಗ್ರಹಣ ಸಾಮರ್ಥ್ಯವನ್ನು ಊಹಿಸಿಕೊಳ್ಳಬೇಕು.

ಬ್ಯಾಂಕುಗಳಿಗೆ ಪ್ರದೇಶಗಳನ್ನು ಆಯುವಲ್ಲಿ ಆಯ್ಕೆಯ ಸ್ವಾತಂತ್ರ್ಯ ಪರಿಮಿತವಾಗಿದೆ ಹಾಗೂ ಶಾಖೆಗಳನ್ನು ತೆರೆಯುವಲ್ಲಿ ಜೀವನ ಸಾಮರ್ಥ್ಯದ ಆಳವಾದ ಅಧ್ಯಯನ ಮಾಡುವುದನ್ನು ಬಹುತೇಕ ಬ್ಯಾಂಕುಗಳು ಬಿಟ್ಟುಕೊಟ್ಟಂತೆ ಕಾಣುತ್ತದೆ. ವ್ಯಾಪಕ ವಿಸ್ತರಣ ಹಾಗೂ ವೈವಿಧ್ಯೀಕರಣದ ಮತ್ತೊಂದು ತೀವ್ರವಾದ ತೊಂದರೆಯೆಂದರೆ ಹೆಚ್ಚುತ್ತಿರುವ ಕಟಬಾಕಿ ಮೊತ್ತಗಳು ಅದರಲ್ಲೂ ವಿಶೇಷವಾಗಿ ಕೃಷಿ, ಸಣ್ಣ ಕೈಗಾರಿಕೆ ಮುಂತಾದ ಕ್ಷೇತ್ರಗಳಿಗೆ ನೀಡಲಾಗುವ ಹೊಸ ಹೊಸ ಬಗೆಯ ಸಾಲಗಳಿಗೆ ಸಂಬಂಧಿಸಿದಂತಹವು. ಪ್ರಾದೇಶಿಕ ಗ್ರಾಮೀಣ ಹಾಗೂ ಸಹಕಾರಿ ಬ್ಯಾಂಕುಗಳ ವಿಶಿಷ್ಟ ಸಂರಚನೆಯಿಂದಾಗಿ ಶಾಖಾ ವಿಸ್ತರಣೆಯನ್ನು ಅವಕ್ಕೆ ಬಿಟ್ಟುಕೊಡಬೇಕು. ನಿಯತ ಅವಧಿಯಲ್ಲಿ ವರ್ಗಾವಣೆಗೆ ಒಳಪಡುವ ಅಧಿಕಾರಿಗಳಿಂದ ನಿರ್ವಹಣೆಯಾಗುತ್ತಿರುವ ವಾಣಿಜ್ಯ ಬ್ಯಾಂಕುಗಳಿಂದ ಅಲ್ಲಿ ಆತ್ಮೀಯ ಸೇವೆ ಸಾಧ್ಯವಿಲ್ಲ. ಒಂದು ಪ್ರದೇಶದ ಜನರೊಂದಿಗೆ ನಿಕಟ ಸಂಪರ್ಕ ಹೊಂದಿರುವ ಸ್ಥಳೀಯ ಅಧಿಕಾರಿಗಳ ನೇತೃತ್ವದ ಪಟ್ಟಣ ಸಹಕಾರಿ ಬ್ಯಾಂಕುಗಳು ಸಲ್ಲಿಸುವ ಸೇವೆಗಳು ಹೆಚ್ಚು ಆತ್ಮೀಯವೂ ಅರ್ಥಪೂರ್ಣವೂ ಆಗಿರುತ್ತವೆ.

ಬ್ಯಾಂಕಿಂಗ್ ಉದ್ಯಮದ ಮಾನವ ಸಂಪನ್ಮೂಲಗಳ ಬೆಳವಣಿಗೆಯು ವ್ಯವಹಾರದ ಗಾತ್ರದ ಹೆಚ್ಚಳಕ್ಕೆ ಅನುಗುಣವಾಗಿ ಸಾಗಲಿಲ್ಲ. ಬ್ಯಾಂಕೊಂದರ ಜನಬಲದ ಬೇಡಿಕೆ ಹಾಗೂ ನೇಮಕಾತಿ ಮಂಡಳಿಗಳ ಮೂಲಕ ಅದರ ಪೂರೈಕೆ ಇವುಗಳ ನಡುವಣ ಕಾಲದ ಅಂತರ ಗಣನೀಯವಾಗಿ ವಿಸ್ತರಿಸಿದೆ. ಯಾವಾಗ ಮತ್ತು ಯಾವ ಹುದ್ದೆಗಳಿಗೆ, ಯಾವ ಪ್ರದೇಶಗಳಲ್ಲಿ ಎಷ್ಟು ಕೌಶಲದ, ಸಂಮಿಶ್ರಣದ ಎಷ್ಟು ಸಿಬ್ಬಂದಿಯ ಆವಶ್ಯಕತೆಯಿದೆ ಎಂಬುದನ್ನು ಮುಂದಾಗಿಯೇ ಗುರುತಿಸಲು ಗ್ರಾಮೀಣ ಶಾಖಾ ಜಾಲವುಳ್ಳ ಬ್ಯಾಂಕುಗಳಿಗೆ ಸಹಾಯಕವಾಗಬಲ್ಲ ಜನಬಲ ಯೋಜನೆಯ ನಿರ್ಧಿಷ್ಟವಾದ ಹಾಗೂ ವೈಜ್ಞಾನಿಕವಾದ ಪ್ರಕ್ರಿಯೆಯೊಂದು ಇರಬೇಕು.

ಈ ಐದು ವರ್ಷಗಳಿಂದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಕಾರ್ಯಾಚರಣೆಯಲ್ಲಿವೆ. ಈ ಅವಧಿಯಲ್ಲಿ ಪ್ರಾದೇಶಿಕ ಬ್ಯಾಂಕುಗಳ ಸಂಖ್ಯೆ ದೃಢವಾಗಿ ಬೆಳೆದಿದೆ. ಯಾವ ಉದ್ದೇಶಗಳಿಗಾಗಿ ಇವು ಸ್ಥಾಪಿತವಾದುವೋ ಅವುಗಳ ಉದ್ದೇಶಗಳಿಗೆ ತಕ್ಕಂತೆ ಸಣ್ಣ ಹಾಗೂ ಸೀಮಾಂತ ರೈತ ಹಾಗೂ ಕೃಷಿ ಕಾರ್ಮಿಕರಿಗೆ ಅವುಗಳ ಸಹಾಯ ದೊರಕಿದೆ. ಗ್ರಾಮೀಣ ಪ್ರದೇಶಗಳಲ್ಲಿ ಬಡತನವನ್ನು ಹತ್ತಿಕ್ಕಲು ಭೂಹೀನ ಕಾರ್ಮಿಕರಂತಹ ದುರ್ಬಲ ವರ್ಗಗಳಿಗೆ ಹಣಕಾಸು ನೆರವನ್ನು ಈ ಬ್ಯಾಂಕುಗಳು ಒದಗಿಸಬೇಕಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಜನಸಂಖ್ಯೆಯ ಪೈಕಿ ದಾರಿದ್ರ್ಯರೇಖೆಯ ಕೆಳಗಿರುವವರ ಶೇಕಡಾವಾರು 50.8ರಷ್ಟು ಎಂದು ಅಂದಾಜುಮಾಡಲಾಗಿದೆ. ಅಂತೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪ್ರಸಕ್ತ ಕಾರ್ಯನಿರ್ವಹಣೆ ಅವುಗಳ ಬೃಹತ್ ಅಗತ್ಯಗಳಿಗೆ ಅನುಗುಣವಾಗಿಲ್ಲ. ಅವುಗಳ ಭೌಗೋಳಿಕ ವ್ಯಾಪನ ಅಸಮವಾಗಿದೆ ಎಂದು ಹೇಳಲಾಗಿದೆ. ಉದರಿಯ ಮೂಲಕ ಗ್ರಾಮೀಣ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿ ಅತ್ಯಂತ ವೀರ್ಯವತ್ತಾದ ಸಾಧನವೆಂದು ಪರಿಗಣಿಸಬೇಕು. ಅಂತೆಯೇ ಅದನ್ನು ಸರ್ವರೀತಿಯಲ್ಲಿ ಬಲಪಡಿಸಬೇಕು.

ರಿಸರ್ವ್ ಬ್ಯಾಂಕಿನ ಉಪ ಗೌರ್ನರರೂ (ರಾಷ್ಟ್ರೀಯ) ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ರಾಷ್ಟ್ರೀಯ ಬ್ಯಾಂಕಿನ ಅಧ್ಯಕ್ಷರೂ ಆದ ಶ್ರೀ ಎಂ. ರಾಮಕೃಷ್ಣಯ್ಯನವರು ಹೈದರಾಬಾದಿನಲ್ಲಿ ಈಚೆಗೆ ಜರುಗಿದ ರಾಜ್ಯಮಟ್ಟದ ಸಮ್ಮೇಳನವೊಂದರಲ್ಲಿ ಗ್ರಾಮೀಣ ಬ್ಯಾಂಕುಗಳ ಕಾರ್ಯವನ್ನು ಕುರಿತು ಹೇಳಿದ್ದನ್ನು ಇಲ್ಲಿ ಜ್ಞಾಪಿಸಿಕೊಳ್ಳುವುದು ಅಪ್ರಸ್ತುತವಾಗಲಾರದು. ಬ್ಯಾಂಕುಗಳ ಗ್ರಾಮೀಣ ಶಾಖೆಗಳಿವೆ, ಆದರೆ ಗ್ರಾಮೀಣ ಬ್ಯಾಂಕರು ಎಂಬುವನೇ ಸದ್ಯದಲ್ಲಿಲ್ಲ ಎಂಬುದರ ಕಡೆಗೆ ಅವರು ಗಮನ ಸೆಳೆದರು. ಇದು ನಿಜ. ಗ್ರಾಮೀಣ ಪ್ರದೇಶದಲ್ಲಿನ ಜನಕ್ಕೆ ಅಗತ್ಯವಾಗಿರುವುದು ಹೆಚ್ಚು ಆತ್ಮೀಯವಾದ ಹಾಗೂ ವೃತ್ತಿಪರ ಸೇವೆಗಳು. ಇವಕ್ಕೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಅತ್ಯಂತ ಯೋಗ್ಯವಾದವು. ಗ್ರಾಮೀಣ ಸಾಲ ನೀಡಿಕೆಯಲ್ಲಿ ಇಂತಹ ಶಕ್ತಿಯುತ ಸಾಧನವನ್ನು ಗ್ರಾಮೀಣ ಜನಸಮೂಹಕ್ಕೆ ಗರಿಷ್ಠ ಅನುಕೂಲವಾಗುವಂತೆ ಪ್ರಯೋಗಿಸಿ ನೋಡಬೇಕು. ಗ್ರಾಮೀಣ ಪ್ರದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳ ಶಾಖಾ ವಿಸ್ತರಣೆಯನ್ನು ಮಂದಗೊಳಿಸಬಹುದು ಮತ್ತು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಹಕಾರಿ ಬ್ಯಾಂಕುಗಳ ನಿಕಟ ಸಹಯೋಗದೊಂದಿಗೆ ಗ್ರಾಮೀಣ ಜನಸಮೂಹಕ್ಕೆ ಸೇವೆಯನ್ನು ಒದಗಿಸಲು ಹಾಗೂ ಗ್ರಾಮೀಣ ಬಡತನವನ್ನು ಹತ್ತಿಕ್ಕಲು ಗ್ರಾಮೀಣ ಪ್ರದೇಶದಲ್ಲಿನ ಬ್ಯಾಂಕ್‌ರಹಿತ ಕೇಂದ್ರಗಳಿಗೆ ಪ್ರವೇಶಿಸಲೇಬೇಕು. ವಾಣಿಜ್ಯ ಬ್ಯಾಂಕಿನ ಗ್ರಾಮೀಣ ಶಾಖೆಗಳು (ತಮ್ಮ ಭದ್ರತಾಪರವಾದ ಸಾಲ ನೀಡಿಕೆ ನೀತಿಯೊಂದಿಗೆ) ಮುಂಗಡಗಳನ್ನು ಮಂಜೂರುಮಾಡುವ ಕಛೇರಿಗಳಿಗಿಂತಲೂ 'ಠೇವಣಿ ಸಂಗ್ರಹಿಸುವ ಕಛೇರಿ'ಗಳಾಗಿ ಕಾರ್ಯಪ್ರವೃತ್ತವಾಗಿವೆ ಎಂಬುದನ್ನು ಹಿಂದಿನ ಅನುಭವ ತೋರಿಸಿದೆ. ಹಾಗೂ ಸಹಕಾರೀ ಸಂಘಗಳು ಸಾಲ ಕೊಡುವ ಸಂಸ್ಥೆಗಳಾಗಿ ಕಾರ್ಯ ನಡೆಸಿವೆ. ಇದರ ಫಲವೆಂದರೆ ಅಗಾಧ ಕಟಬಾಕಿ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ತಮ್ಮ ವಿಶಿಷ್ಟ ಗುಣದಿಂದಾಗಿ ಗ್ರಾಮ ಸಹಕಾರ ಸಂಸ್ಥೆಗಳೊಂದಿಗೆ ಸಂಪರ್ಕ ಕಲ್ಪಿಸುವುದರಿಂದ ಅವು ಈ ಅವಳಿ ಉದ್ದೇಶಗಳನ್ನು ಈಡೇರಿಸುತ್ತವೆಂದು ಯೋಜಿಸಲಾಗಿದೆ (ಪರಿಭಾವಿಸಲಾಗಿದೆ). ಸಹಕಾರಿ ಚಳುವಳಿಯ ಅಡ್ಡಾದಿಡ್ಡಿ

ಹಾಗೂ ಅಸಮರ್ಪಕ ಬೆಳವಣಿಗೆಯಿಂದ ಉಂಟಾದ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿನ ಉದರಿ ಕೊರತೆಗಳನ್ನು ತುಂಬುವ ಅಗತ್ಯದಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳ ವಿಸ್ತರಣೆಗ ಸ್ಫೂರ್ತಿ ಬಂದಿತು. ಹೀಗೆ ಬ್ಯಾಂಕುಗಳು ಸಹಕಾರಿ ಉದರಿ ಸಂರಚನೆಗೆ ಅನುಬಂಧಿತವಾದ ಪಾತ್ರವೊಂದನ್ನು ನಿರ್ವಹಿಸಬೇಕಾಗಿತ್ತು. ಕೇವಲ ಗ್ರಾಮೀಣ ಉದರಿಯಿಂದಲೇ ಆರ್ಥಿಕ ಕ್ರಾಂತಿಯನ್ನು ತರಬಲ್ಲೆವೆಂದು ಬ್ಯಾಂಕರರು ನಂಬುತ್ತಾರೆ. ಇದೊಂದು ತಪ್ಪು ಗ್ರಹಿಕೆ. ಇದು ಸೂಲಗಿತ್ತಿಯೇ ಮಗುವನ್ನು ಹೆರುತ್ತಾಳೆ ಎಂದು ನಿರೀಕ್ಷಿಸಿದಂತೆ. ಆದಾಗ್ಯೂ ಅಭಿವೃದ್ಧಿಶೀಲ ದೇಶದಲ್ಲಿ ಉತ್ಪಾದನೆಗಾಗಿ ಉದರಿ ಒದಗಿಸುವುದಷ್ಟೇ ಸಾಲದು. ಮುಖ್ಯವಾದದ್ದೆಂದರೆ ಸುಧಾರಿಸಿದ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದರಿಂದ ಉತ್ಪಾದನೆಯನ್ನೇ ಹೆಚ್ಚಿಸಬೇಕು. ತಂತ್ರಜ್ಞಾನವನ್ನು ಉನ್ನತಗೊಳಿಸುವ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗವಹಿಸುವುದರ ಮೂಲಕ ಉತ್ಪಾದಕತೆಯನ್ನು ಸುಧಾರಿಸುವ ಪ್ರಕ್ರಿಯೆಗೆ ಉದರಿ ನೀಡುವ ಸಂಸ್ಥೆಗಳು ಕೂಡ ಕಾಣಿಕೆಯನ್ನು ಸಲ್ಲಿಸಬೇಕಾಗುತ್ತದೆ.

ಈ ವರೆಗೆ ಗ್ರಾಮೀಣ ಉದರಿಯ ಹೆಚ್ಚು ಭಾಗ ಅನೌಪಚಾರಿಕ ವಲಯದಿಂದ ಒದಗಿಸಲಾಗುತ್ತಿದ್ದುದರಿಂದ ಬಹು-ಅಭಿಕರಣ ಮಾರ್ಗವನ್ನು ಆರಿಸುವುದು ಅವಶ್ಯ. ಉದರಿಯ ದಕ್ಷ ವಿತರಣೆಯಲ್ಲಿ ಅನಾರೋಗ್ಯಕರ ಪೈಪೋಟಿಯ ಜೊತೆಗೆ ಬ್ಯಾಂಕಿಂಗ್ ಸೌಲಭ್ಯಗಳ ಅತಿವ್ಯಾಪ್ತಿ ಹಾಗೂ ಪುನರಾವರ್ತನೆ ಮತ್ತು ತತ್ಫಲವಾದ ವ್ಯರ್ಥ ವ್ಯಯವೇ ಮುಂತಾದ ಕೆಲವು ಸಮಸ್ಯೆಗಳು ಈ ಧೋರಣೆಯಿಂದ ತಲೆದೋರುತ್ತವೆ.

ಆದುದರಿಂದ ಈ ಕ್ಷೇತ್ರದಲ್ಲಿ ಕಾರ್ಯಾಚರಣೆ ಮಾಡುತ್ತಿರುವ ವಿವಿಧ ಸಂಸ್ಥೆಗಳ ಚಟುವಟಿಕೆಗಳಲ್ಲಿ ಇನ್ನೂ ನಿಕಟತರ ಸಂಯೋಜನೆ ಇರಬೇಕು. ಎಲ್ಲ ಅಭಿಕರಣಗಳ ಸಂಪನ್ಮೂಲಗಳನ್ನು ಒಟ್ಟುಗೂಡಿಸಿ ಸರಿಯಾಗಿ ಗುರುತಿಸಲಾದ ಗ್ರಾಮೀಣ ಫಲಾನುಭವಿಗಳಿಗೆ ದಕ್ಷತೆಯಿಂದ ಉದರಿ ವಿತರಣೆ ಮಾಡುವುದು ಲೇಸು.

ಗ್ರಾಮೀಣ ಪ್ರದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳಿಗೆ ಆಗಾಗ್ಗೆ ಎದುರಾಗುವ ಪ್ರಬಲವಾದ ಸಮಸ್ಯೆಯೆಂದರೆ ಹೆಚ್ಚುತ್ತಿರುವ ಕಟಬಾಕಿ ಸಾಲಗಳು. ಇದಕ್ಕೆ ಫಲಾನುಭವಿಗಳನ್ನು ಗುರ್ತಿಸಿ ಆರಿಸುವುದರಲ್ಲಿ ಪಾಲಿಸಲಾಗುವ ವಿವಿಧ ಪದ್ಧತಿಗಳು ಮತ್ತು ಕಾರ್ಯವಿಧಾನಗಳು, ಸಾಲದ ಅರ್ಜಿಗಳನ್ನು ಸಂಸ್ಕರಣ ಮಾಡುವುದರಲ್ಲಿನ ದೋಷ, ಸಾಲ ನೀಡುವಿಕೆಯ ನೀತಿಗಳು, ವಿತರಣೆಯ ಕ್ರಮಗಳು ಮತ್ತು ಉದರಿಯ ಅಂತಿಮ ಉದ್ದೇಶಿತ ಬಳಕೆಯ ಅದಕ್ಷ ಮೇಲ್ವಿಚಾರಣೆ—ಮುಂತಾದವೇ ಕಾರಣಗಳು. ಅವಾಸ್ತವಿಕ ಮರುಪಾವತಿ ಸೂಚಿಗಳೂ ಇದಕ್ಕೆ ಕಾರಣ. ಗ್ರಾಮೀಣ ಪ್ರದೇಶಗಳಲ್ಲಿ ಸಾಲವಸೂಲಿಯನ್ನು ಸುಧಾರಿಸಲು ಈ ಮುಂಚೆ ಹೇಳಿರುವ ಎಲ್ಲ ಸಮಸ್ಯೆಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಗ್ರಾಮೀಣ ಕುಶಲಕರ್ಮಿಯ ಒಂದು ಪ್ರಮುಖ ಹಾಗೂ ವಿಚಿತ್ರ ವೈಲಕ್ಷಣ್ಯವೆಂದರೆ ಸ್ವಯಂ-ಶೋಷಣೆ. ಉದಾಹರಣೆಗೆ ತನ್ನ ಮಗುವಿಗೆ ಒಳ್ಳೆಯ ಶಿಕ್ಷಣವನ್ನು ನೀಡಲು ಸೌಲಭ್ಯಗಳನ್ನು ಒದಗಿಸಲಾಗದಿದ್ದರೂ, ರೈತ ಅವನ್ನು ಬಳಸದೆ ತನ್ನ ಮಗುವನ್ನು ಕೃಷಿಕವಾಗಿಯೇ ಉಳಿಯಲು ಒತ್ತಾಯಿಸುತ್ತಾನೆ. ಆದುದರಿಂದ ಗ್ರಾಮೀಣ ಜನಸ್ತೋಮದ ಶಿಕ್ಷಣ, ಅವರಲ್ಲಿ ಬ್ಯಾಂಕಿಂಗ್ ಅಭ್ಯಾಸದ ಅಭಿವೃದ್ಧಿ ಮತ್ತು ಅವರ ಪ್ರಯೋಜನಕ್ಕೆ ಒದಗಿಸಲಾಗಿರುವ ವಿವಿಧ ಸೌಲಭ್ಯಗಳ ಉಪಯೋಗದಲ್ಲಿ ಅವರಿಗೆ ಸಹಾಯ—ಇವು ಅವಶ್ಯ. ಗ್ರಾಮೀಣ ಉಳಿತಾಯವನ್ನು ಪರಿಚಯಿಸಲು ಗ್ರಾಮೀಣ ಬ್ಯಾಂಕುಗಳು ಅತ್ಯಂತ ಯೋಗ್ಯವಾಗಿವೆ. ಗ್ರಾಮೀಣ ಜನರ ಏಳಿಗೆಗಾಗಿರುವ ಯೋಜನೆಗಳನ್ನು ಕಾರ್ಯಗತಮಾಡುವುದರಲ್ಲಿ ಸ್ವಯಂಸೇವಾ ಸಂಸ್ಥೆಗಳು ಮತ್ತು ಇತರ ಸಮಾಜಸೇವಾ ಸಂಸ್ಥೆಗಳ ನೆರವನ್ನು ಈ ಬ್ಯಾಂಕುಗಳು ತೆಗೆದುಕೊಳ್ಳಬಹುದಾಗಿದೆ. ಗ್ರಾಮೀಣ ಬ್ಯಾಂಕುಗಳು ಗ್ರಾಮೀಣ ನಾಯಕತ್ವದ ಸಂಘಟನೆಗೂ ಸಿದ್ಧವಾಗಿರಬೇಕು. ಈ ನಾಯಕತ್ವದೊಂದಿಗೆ ಸಂಯೋಗ ಸಾಧಿಸಿ ಅವು ಗ್ರಾಮೀಣ ಜನಸ್ತೋಮದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವ ಯೋಜನೆಗಳನ್ನು ಕಾರ್ಯಗತಮಾಡಬಹುದು.

ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ರಾಷ್ಟ್ರೀಯ ಬ್ಯಾಂಕಿನ (ಕೃ.ಗ್ರಾ.ಅ.ರಾ.ಬ್ಯಾಂ) ಸ್ಥಾಪನೆ ಸರಿಯಾದ ದಿಕ್ಕಿನಲ್ಲಿ ಸರಿಯಾದ ಹೆಜ್ಜೆ. ಕೃ.ಗ್ರಾ.ಅ.ರಾ.ಬ್ಯಾಂ. ವಾಣಿಜ್ಯ ಬ್ಯಾಂಕುಗಳ ಸಂಪನ್ಮೂಲಗಳನ್ನು ಪುನರ್ಧನ ಸೌಲಭ್ಯಗಳ ಮೂಲಕ ಹೆಚ್ಚಿಸುವುದೇ ಅಲ್ಲದೆ ಗ್ರಾಮೀಣ ಅಭಿವೃದ್ಧಿಯನ್ನು ಉತ್ತೇಜಿಸುವುದಕ್ಕಾಗಿ ಅವುಗಳ ಪ್ರಯತ್ನಗಳಲ್ಲಿಯೂ ಬೆಂಬಲವನ್ನು ನೀಡುವುದೆಂದೂ ನಿರೀಕ್ಷಿಸಲಾಗಿದೆ. ಕೃ.ಗ್ರಾ.ಅ.ರಾ.ಬ್ಯಾಂ. ನಾಯಕತ್ವವನ್ನು ವಹಿಸಿಕೊಂಡು ಎಲ್ಲ ಗ್ರಾಮೀಣ ಅಭಿಕರಣ ಕಲಾಪಗಳನ್ನು ಸಂಯೋಜಿಸಿ ಗ್ರಾಮೀಣ ಅಭಿವೃದ್ಧಿಯ ಕಾರ್ಯದ ಸವಾಲನ್ನು ಎದುರಿಸಲು ಯೋಗ್ಯ ಗ್ರಾಮೀಣ ಬ್ಯಾಂಕು ಸಂರಚನೆಯ ಸೃಷ್ಟಿಯಲ್ಲಿ ಸಹಾಯ ನೀಡುವುದೆಂದು ನಿರೀಕ್ಷಿಸಲಾಗಿದೆ.

ಭದ್ರತಾಪರ ಉದರಿ ಆಧಾರಿತ ಮೂಲ ಬ್ಯಾಂಕಿಂಗ್ ಪರಿಕಲ್ಪನೆಯಿಂದ ಅಭಿವೃದ್ಧಿ ಉದ್ದೇಶಪರ ಉದರಿ ಆಧಾರಿತ ಸಾಮಾಜಿಕ ಬ್ಯಾಂಕಿಂಗ್ ಪರಿಕಲ್ಪನೆ ವಿಸ್ತೃತವಾಗಿದೆ ಎಂಬುದನ್ನು ಅನುಭವ ತೋರಿಸಿಕೊಟ್ಟಿದೆ. ಪಟ್ಟಣಪರ ಆಧಾರಿತ ಸಾಲ ನೀಡಿಕೆಯಿಂದ ಗ್ರಾಮೀಣ ಆಧಾರಿತ ಸಾಲ ನೀಡಿಕೆಗೆ ಬದಲಾವಣೆಯನ್ನು ಸಮಾಜ ದೃಷ್ಟಿಯ ಬ್ಯಾಂಕಿಂಗ್ ಪರಿಕಲ್ಪನೆ ಕರೆ ನೀಡುತ್ತದೆ. ಇದು ಸರಿಯಾದ ದಿಕ್ಕಿನಲ್ಲಿ ಬದಲಾವಣೆ. ಉತ್ತಮ ಹಳ್ಳಿ ಉತ್ತಮ ರಾಷ್ಟ್ರ ಎಂಬ ಪರಿಕಲ್ಪನೆಯತ್ತ ಸಾಮಾಜಿಕ ಬ್ಯಾಂಕಿಂಗ್ ಗುರಿ ಹೊಂದಬೇಕು. (ಯುಕ್ತ ವಿಸ್ತರಣ ಯೋಜನೆ

ಇಲ್ಲದೆ) ಸಾಲದ ಅಂತಿಮೋದ್ದೇಶದ ಬಳಕೆಯ ಸೂಕ್ತ ಮೇಲ್ವಿಚಾರಣೆ ಇಲ್ಲದೆ ಮತ್ತು ಮೂಲ ಅಧೋರಚನೆಯ ಸೌಲಭ್ಯಗಳನ್ನು ನಿರ್ಮಿಸದೆ (ಗ್ರಾಮೀಣ ಪ್ರದೇಶಗಳಲ್ಲಿ ಹೊಸ ಶಾಖೆಗಳನ್ನು ತೆರೆಯುವುದೆಂದರೆ ನಾಯಿಕೊಡೆಗಳ ರೀತಿ ಬೆಳೆಯಲು ಮತ್ತು ಕೇವಲ ಧ್ವಜಸ್ತಂಭಗಳಾಗಿ ಉಳಿದು ಒಂದು ಆರ್ಥಿಕ ಹೊಣಭಾರವಾಗುತ್ತದೆ. ಕುದುರೆಯ ಮುಂದೆ ಬಂಡಿ ಹೂಡಿದ ಹಾಗೆ ಅಸಮರ್ಪಕ ಯೋಜನೆ.

ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಸೌಲಭ್ಯಗಳ ಸಂಯೋಜನೆಯು ಜೊತೆಗೆ ಸಾರಿಗೆ, ಸಂಪರ್ಕ, ಮಾರಾಟ ಗಾರಿಕೆ ಇಂಥ ಇತರ ಅಧೋರಚನಾತ್ಮಕ ಸೌಲಭ್ಯಗಳನ್ನು ಒದಗಿಸುವುದು ಅವಶ್ಯ ಎಂಬುದನ್ನು ಸರಕಾರ ಕೂಡಾ ಮನಗಾಣಬೇಕು. ಗ್ರಾಮೀಣ ಉದರಿಗೆ ಸಂಬಂಧಿಸಿದಂತೆ ಸದ್ಯದ ಹಿನ್ನೆಲೆಯ ಬೆಳಕಿನಲ್ಲಿ ಕೇಂದ್ರ ಸರ್ಕಾರ ಗ್ರಾಮೀಣ ಬ್ಯಾಂಕುಗಳು ಹಾಗೂ ಇತರ ಉದರಿ ಸಂಸ್ಥೆಗಳ ಕಾರ್ಯಾಚರಣೆಯತ್ತ ಹೊಸ ದೃಷ್ಟಿ ಹೊಂದಬೇಕು ಮತ್ತು ಬೋಧನೆ ಮತ್ತು ಆಚರಣೆ, ಸಂಕಲ್ಪ ಮತ್ತು ಸಾಧನೆ ಇವುಗಳ ನಡುವಣ ಕಂದರವನ್ನು ಸಂಪೂರ್ಣವಾಗಿ ತೊಡೆದುಹಾಕ ಲಾಗದಿದ್ದರೂ ಕಿರಿದಾಗುವಂತೆ ಯೋಗ್ಯ ಗ್ರಾಮೀಣ ಉದರಿ ಸಂರಚನೆಯನ್ನು ಕುರಿತ ಯಾವುದಾದರೂ ವಾಸ್ತವಿಕ ಸಲಹೆಗಳನ್ನು ಮುಂದಿಡಲು ಇದು ಸಕಾಲವಾಗಿದೆ.

---

## ವಿನಂತಿ

ಬ್ಯಾಂಕಿಂಗ್ ಪ್ರಪಂಚದ ಅನೇಕ ಆಜೀವ ಸದಸ್ಯರು ಬ್ಯಾಂಕ್ ಉದ್ಯೋಗಿಗಳೇ ಆಗಿರುವುದರಿಂದ, ವರ್ಗಾವಣೆ ಅನಿವಾರ್ಯ. ಸಾಮಾನ್ಯವಾಗಿ ಬ್ಯಾಂಕಿಂಗ್ ಪ್ರಪಂಚವನ್ನು ನಮ್ಮಲ್ಲಿರುವ ವಿಳಾಸಕ್ಕೆ ಕಳುಹಿಸುತ್ತೇವೆ. ಆದರೆ ಎಷ್ಟೋ ಜನರಿಗೆ ನಿಯತಕಾಲಿಕ ತಲುಪುತ್ತಿಲ್ಲ ಎಂದು ದೂರುಗಳು ಬರುತ್ತಿವೆ. ಆದುದರಿಂದ ನಮ್ಮ ಚಂದಾದಾರರು ವರ್ಗವಾದಾಗ ಯಾವ ವಿಳಾಸಕ್ಕೆ ನಿಯತಕಾಲಿಕವನ್ನು ಕಳುಹಿಸಬೇಕೆಂದು ಒಂದು ಕಾರ್ಡಿನ ಮೂಲಕ ತಿಳಿಸಿದರೆ ಅನುಕೂಲವಾಗುತ್ತದೆ. ಕಾಯಂ ವಿಳಾಸ ಅಥವಾ ಮನೆಯ ವಿಳಾಸವನ್ನು ಒದಗಿಸಿದರೂ ಅನುಕೂಲವಾಗುವುದು. ಚಂದಾದಾರರು ಸಹಕರಿಸಬೇಕಾಗಿ ವಿನಂತಿ.

# ಬ್ಯಾಂಕರುಗಳ ಮೇಲೆ ಪರಿಣಾಮ ಬೀರುವ ನ್ಯಾಯ ತೀರ್ಪುಗಳು*

ಅನುವಾದ: **ಬಿ. ಎಸ್. ಚಂದ್ರಶೇಖರ್**
**ಪಾ. ರಾಜಗೋಪಾಲ**

## ಪರಕ್ರಾಮ್ಯ ಸಂಲೇಖಗಳ ಅಧಿನಿಯಮ ಪ್ರಕರಣ *50*: ಹಿಂಬರಹದ ಪರಿಣಾಮ — ಗ್ರಾಹಕರ ಖಾತೆಗೆ ಬ್ಯಾಂಕಿನಿಂದ ಹುಂಡಿಗಳ ಮೌಲ್ಯದ ಧನಿಕೆ - ಹುಂಡಿಗಳ ಪೂರ್ಣ ಮೌಲ್ಯಕ್ಕೆ ಬ್ಯಾಂಕು ಧಾರಕವೆ? — ಗ್ರಾಹಕನಿಗೆ ದಸ್ತಾವೇಜುಗಳನ್ನು ಹಿಂದಿರುಗಿಸದೆ ಬ್ಯಾಂಕು ಧನಿಕೆ ನಮೂದನ್ನು ವಿಪರ್ಯಯ ಮಾಡಬಹುದೆ?

**ದೇನಾ ಬ್ಯಾಂಕ್** ಅಪೀಲುದಾರ

**ವಿ.**

**ಮಧ್ಯಪ್ರದೇಶ ರಾಷ್ಟ್ರೀಯ ಜವಳಿ ನಿಗಮ ಪರಿಮಿತ** ಅಪೀಲು ಪ್ರತಿವಾದಿ

**ಅಖಿಲ ಭಾರತ ವರದಿ (ಅ.ಭಾ.ವ.)—1982** ಮಧ್ಯಪ್ರದೇಶ (ಮ. ಪ್ರ.) 85

ಕೈಗಾರಿಕೆಗಳ ಅಭಿವೃದ್ಧಿ ಹಾಗೂ ನಿಬಂಧನೆ ಅಧಿನಿಯಮದ ಅಡಿಯಲ್ಲಿ ಅಧಿಕೃತ ನಿಯಂತ್ರಕರ ನಿರ್ವಹಣೆಗೆ ಒಳಪಟ್ಟ ತಪತಿ ಗಿರಣಿ, ಬರ್ಹಾಂಪುರ—ಎಂಬ ಪರಿಮಿತ ಕಂಪನಿಯು ಮೋಟಾರು ಸಾರಿಗೆ ರಸೀತಿಗಳ ಸಲ್ಲಿಕೆಯ ಮೇಲೆ ಬಟವಾಡೆ ಮಾಡುವಂತೆ 'ರಸ್ತೆ ಸಾರಿಗೆ ಕಂಪನಿ' ಎಂಬ ಸಾಗಣೆದಾರರ ಮೂಲಕ 43 ಬೇಲು ಬಟ್ಟೆಯನ್ನು ರವಾನೆಗಾಗಿ ಗೊತ್ತುಪಾಡುಮಾಡಿ, ಸದರಿ ರಸೀತಿಗಳನ್ನು, ಪ್ರತಿವಾದಿ ಬ್ಯಾಂಕಿನ ಬರ್ಹಾಂಪುರ ಶಾಖೆಗೆ ರವಾನಿಸಿದ ಸರಕಿನ ಮೌಲ್ಯವನ್ನು ಒಳಗೊಂಡ ಹಾಗೂ ಬ್ಯಾಂಕಿಗೆ ಹಿಂಬರಹ ಮಾಡಲಾದ ತಗಾದೆ ಡ್ರಾಫ್ಟ್‌ಗಳೊಂದಿಗೆ, ಹಾಜರುಪಡಿಸಿತು. ಹುಂಡಿ ಖರೀದಿ ಸೌಲಭ್ಯದ ವಾಡಿಕೆಗೆ ಅನುಗುಣವಾಗಿ ಬ್ಯಾಂಕು ಸೆಮಾಪುರ್ ಪೂರ್ಣಿಯಾ, ಬಿಹಾರದ ಬಾಂಟೆ ಜವಳಿ ಅಭಿಕರಣ ಇವರ ಮೇಲೆ ರಚಿಸಲಾದ ಸದರಿ ಹುಂಡಿಗಳನ್ನು ಸಂಬಂಧಿಸಿದ ಸಾರಿಗೆ ರಸೀದಿಗಳೊಂದಿಗೆ ಖರೀದಿಸಿತು. ಬ್ಯಾಂಕು ಕಂಪನಿಯ ಖಾತೆಗೆ ರೂ. 77,975/50 ಧನಿಸಿತು; ಹಾಗೂ ಸಂಬಂಧಿಸಿದ ಕಕ್ಷಿಯಿಂದ ಆ ಮೊಬಲಗನ್ನು ಪಡೆದು ತನಗೇ ಪುನರ್ಭರ್ತಿ ಮಾಡಿಕೊಳ್ಳುವ ಜವಾಬ್ದಾರಿಯನ್ನು ತೆಗೆದುಕೊಂಡಿತು. ಆದಾಗ್ಯೂ, ಬ್ಯಾಂಕು ಆ ಮೊಬಲಗನ್ನು ವಸೂಲು ಮಾಡಿಕೊಳ್ಳುವುದರಲ್ಲಿ ವಿಫಲಗೊಂಡಿತು. ಸದರಿ ಹುಂಡಿಗಳ ಮೊಬಲಗನ್ನು ಕಂಪನಿಯ ಖಾತೆಗೆ ಋಣಿಸುತ್ತಿರುವುದಾಗಿ ಬ್ಯಾಂಕು ಕಂಪನಿಗೆ 5-5-1972ರ ತನ್ನ ಪತ್ರದಲ್ಲಿ ತಿಳಿಸಿತು. ಬ್ಯಾಂಕು ಖರೀದಿಸಿದ ಹುಂಡಿಗಳ ಮೊಬಲಗಿನ ಪಾವತಿ ಪಡೆಯಲು ತನಗೆ ಹಕ್ಕುಂಟೆಂಬ, ಸಂಬಂಧಿಸಿದ ದಸ್ತಾವೇಜು ಅಥವಾ ಅದು ಪ್ರತಿನಿಧಿಸುವ ಸರಕನ್ನು ಹಿಂದಿರುಗಿಸಿದ ವಿನಾ ಆ

* 'Legal Decisions Affecting Bankers', *The Journal of the Indian Institute of Bankers* ನಲ್ಲಿ ಪ್ರಕಟವಾದ ಲೇಖನದ ಅನುವಾದ.

ಮೊತ್ತವನ್ನು ಋಣಿಸಲು ಬ್ಯಾಂಕಿಗೆ ಹಕ್ಕಿಲ್ಲವೆಂಬ ಆಧಾರದ ಮೇಲೆ ಕಂಪನಿಯು 10-5-1972ರ ತನ್ನ ಪತ್ರದಲ್ಲಿ ಪ್ರತಿಭಟಿಸಿತು. ಬ್ಯಾಂಕು ಈ ಪ್ರತಿಭಟನೆಯನ್ನು ಲೆಕ್ಕಿಸಲೇ ಇಲ್ಲ. ಆದ್ದರಿಂದ ವಾದಿ ಕಂಪನಿ ದಾವೆಯೊಂದನ್ನು ಹೂಡಿತು.

2 ತಾನು ಯಾವುದೇ ಹುಂಡಿಗಳನ್ನು ಅಥವಾ ದಸ್ತಾವೇಜುಗಳನ್ನು ಖರೀದಿ ಮಾಡಲಿಲ್ಲವೆಂಬ ಹಾಗೂ ಯಾವುದೇ ವಹಿವಾಟುಗಳಲ್ಲಿ ಖರೀದಿಯೆನ್ನುವಂತಹದೇನೂ ಇರಲಿಲ್ಲವೆಂಬ ನಿಲುವನ್ನು ಬ್ಯಾಂಕು ತಳೆಯಿತು. ತಾನು ಕಮಿಷನ್ ಹಾಗೂ ಮಾಮೂಲಿ ನಿರ್ವಹಣೆ ಶುಲ್ಕಗಳನ್ನು ಗಳಿಸುವ ಒಬ್ಬ ವಸೂಲಿ ಅಭಿಕರ್ತನಾಗಿ ಮಾತ್ರ ವ್ಯವಹರಿಸುತ್ತಿತ್ತು ಎಂಬುದಾಗಿ ಬ್ಯಾಂಕು ವಾದಿಸಿತು. ವಸೂಲಿಯನ್ನು ಸುಲಭಗೊಳಿಸುವ ದೃಷ್ಟಿಯಿಂದ ಮಾತ್ರ ದಸ್ತಾವೇಜುಗಳನ್ನು ಬ್ಯಾಂಕಿನ ಪರವಾಗಿ ಹಿಂಬರಹ ಮಾಡಲಾಗಿತ್ತೆಂದೂ, ವಸೂಲಿಯ ನಿರೀಕ್ಷೆಯಿಂದ ಗ್ರಾಹಕರ ಖಾತೆಗೆ ಧನಿಕೆ ಮಾಡಿದ ಮೊಬಲಗಿನ ಭದ್ರತೆಗಾಗಿ ಅದನ್ನು ಮಾಡಲಾಗಿತ್ತೆಂದೂ ಬ್ಯಾಂಕು ಮತ್ತೂ ವಾದಿಸಿತು. ತಾನು ಸದರಿ ಹುಂಡಿಗಳ ಖರೀದಿಗಾರನೆಂಬ ಆಪಾದನೆಗಳು ಸರಿಯಾದುವಲ್ಲವೆಂಬುದು ಬ್ಯಾಂಕಿನ ನಿಲುವು. ಅದು ವಾದಿ ಕಂಪನಿಯ ವಸೂಲಿ ಅಭಿಕರ್ತ ಮಾತ್ರ. ಅಲ್ಲದೆ ಹುಂಡಿಗಳನ್ನು ಸಮಾಪುರ (ಬಿಹಾರ)ದ ಕೆನರಾ ಬ್ಯಾಂಕಿಂಗ್ ಕಾರ್ಪೊರೇಷನ್ ಮೂಲಕ ವಸೂಲಿ ಮಾಡುವಂತೆ ವಾದಿ ಕಂಪನಿಯು ಮೌಖಿಕ ಸೂಚನೆ ನೀಡಿತ್ತೆಂದೂ ಈ ಸೂಚನೆಯನ್ನು ಹುಂಡಿಗಳ ಮೇಲೆ ನಮೂದು ಮಾಡಿತ್ತೆಂದೂ ಬ್ಯಾಂಕು ವಾದವನ್ನು ಮುಂದುವರಿಸಿತು. ಸದರಿ ಸೂಚನೆಗಳ ಪ್ರಕಾರ ಕ್ರಮ ತೆಗೆದುಕೊಂಡು ಪ್ರತಿವಾದಿ ಬ್ಯಾಂಕು ಹುಂಡಿಯಲ್ಲಿ ಹೆಸರಿಸಲಾದ ಗ್ರಹೀತನಿಗೆ ಹಾಜರುಪಡಿಸಿ ವಸೂಲುಮಾಡಲು ಎಲ್ಲ ಹುಂಡಿಗಳನ್ನು ಹಾಗೂ ದಾಖಲೆಗಳನ್ನು ಕಳುಹಿಸಿತು. ಆದರೆ ವಸೂಲಾತಿಯ ಬಗೆಗೆ ಬ್ಯಾಂಕಿಗೆ ತಿಳಿವಳಿಕೆ ಬರಲಿಲ್ಲ. ಬ್ಯಾಂಕು 12-4-1972ರಂದು ಇನ್ನೊಮ್ಮೆ ಪತ್ರ ಬರೆದಾಗ ವಿಳಾಸದಾರ ಸ್ಥಳ ಬಿಟ್ಟಿದ್ದಾನೆಂಬ ಷರಾದೊಂದಿಗೆ ಆ ಪತ್ರ ಮರಳಿ ಬಂತು. ಸಮಾಪುರದಲ್ಲಿ ಕೆನರಾ ಬ್ಯಾಂಕಿನ ಶಾಖೆಯಿರಲಿಲ್ಲವೆಂದೂ ದಸ್ತಾವೇಜುಗಳನ್ನು ಪಡೆದು ಅದರ ಮೇಲೆ ಹಿಂಬರಹವನ್ನು ಕಳ್ಳಸಹಿ ಮಾಡಿ ಸಾಗಣೆದಾರರಿಂದ 43 ಬೇಲು ಬಟ್ಟೆಯ ಬಟವಾಡೆ ಪಡೆಯುವಲ್ಲಿ ಯಾರೋ ವಂಚನೆ ನಡೆಸಿದ್ದಾರೆಂದೂ ಪ್ರತಿವಾದಿ ಬ್ಯಾಂಕಿಗೆ ಆಮೇಲೆ ತಿಳಿದುಬಂತು. ಹುಂಡಿಗಳನ್ನು ಕೆನರಾ ಬ್ಯಾಂಕಿಂಗ್ ಕಾರ್ಪೊರೇಷನ್ನಿಗೆ ಕಳುಹಿಸುವಲ್ಲಿ ಬ್ಯಾಂಕು ಕೇವಲ ವಾದಿ ಕಂಪನಿಯ ಸೂಚನೆಯಂತೆ ಕ್ರಮ ಕೈಗೊಂಡಿತೆಂಬ ಆಧಾರದ ಮೇಲೆ ಧನಿಕೆ ನಮೂದನ್ನು ವಿಪರ್ಯಯ ಮಾಡಿದ್ದು ಸರಿಯೆಂದು ಬ್ಯಾಂಕು ವಾದ ಮಾಡಿತು. ನೋಂದಾಯಿತ ಅಂಚೆ ಕಛೇರಿಯು ವಾದಿ ಕಂಪನಿಯ ಅಭಿಕರ್ತ ಎಂದೂ ಬ್ಯಾಂಕು ವಾದಿಸಿತು. ಓಂಪ್ರಕಾಶ್ ಮತ್ತು ಮಹದೇವ ಇವರು ವಂಚನೆ ಮಾಡಿದರೆಂಬ ಹಾಗೂ ಅಂಚೆ ಮತ್ತು ತಂತಿ ಸಚಿವಾಲಯದೊಡನೆ ಈ ಇಬ್ಬರು ಅವಶ್ಯ ಕಕ್ಷಿದಾರರೆಂಬ ನಿಲುವನ್ನು ಕೂಡ ಅದು ತಳೆಯಿತು.

3 ವಿಚಾರಣೆ ನಡೆಸಿದ ಪ್ರಾಜ್ಞ ನ್ಯಾಯಾಲಯ ಬ್ಯಾಂಕಿನ ವಾದಗಳನ್ನು ಒಪ್ಪಲಿಲ್ಲ. ರೂ. 1500/ - ಬಡ್ಡಿ ಹಾಗೂ ದಾವೆ ಹೂಡಿದ ದಿನಾಂಕದಿಂದ ಮರುವಸೂಲಿಯಾಗುವವರೆಗೆ ಸಾ. ಶೇ. 6ರಂತೆ ಬಡ್ಡಿ ಇವುಗಳ ಜತೆ ರೂ. 77,975-50 ಮೊಬಲಗಿಗೆ ಬ್ಯಾಂಕು ಹೊಣೆಯೆಂದು ನ್ಯಾಯಾಲಯ ತೀರ್ಪು ನೀಡಿತು. ಇದರ ಮೇಲೆ ಬ್ಯಾಂಕು ಉಚ್ಚ ನ್ಯಾಯಾಲಯಕ್ಕೆ ಅಪೀಲು ಮಾಡಿತು. ಒಪ್ಪಂದಿತವಾದ ಒಂದು ದರದಲ್ಲಿ ಬಡ್ಡಿ ಹಾಗೂ ಕಮಿಷನ್ನನ್ನು ಬ್ಯಾಂಕು ವಿಧಿಸುತ್ತಿತ್ತಷ್ಟೆ ಎಂದೂ, ಹುಂಡಿಗಳನ್ನು ವಾದಿಯ ಪರವಾಗಿ ವಸೂಲು ಮಾಡುವಲ್ಲಿ ನಿರ್ವಹಣಾ ಶುಲ್ಕ ಪಡೆಯುತ್ತಿತ್ತೆಂದೂ, ಸಾಗಿಗೆ ಕಂಪನಿಯ ವಶದಲ್ಲಿದ್ದ ಸರಕನ್ನು ಮಾರಲು ಬ್ಯಾಂಕಿಗೆ ಸ್ವಾತಂತ್ರ್ಯವಿರಲಿಲ್ಲವೆಂದೂ ಉಚ್ಚ ನ್ಯಾಯಾಲಯದಲ್ಲಿ ಬ್ಯಾಂಕಿನ ಪರವಾಗಿ ವಾದಿಸಲಾಯಿತು. ವಾದಿ ಕಂಪನಿ ಸಾಧಿಸುತ್ತಿರುವ ಮಾರಾಟ ವಹಿವಾಟುಗಳ ಪರಿಕಲ್ಪನೆಗೇ ಈ ಅಂಶಗಳು ವಿರುದ್ಧವಾದವುಗಳೆಂಬುದು ಬ್ಯಾಂಕಿನ ವಾದ. ಆದ್ದರಿಂದ ಬ್ಯಾಂಕು ತಾನು ಕೇವಲ ಒಬ್ಬ ವಸೂಲಿ ಅಭಿಕರ್ತ ಎಂದು ಒತ್ತಿ ಹೇಳಿತು. ವಾದಿ ಕಂಪನಿಗೆ ಕೊಟ್ಟ ಧನಿಕೆಯು ದಸ್ತಾವೇಜುಗಳು ಪಾವತಿಯಾಗುವುವೆಂಬ ನಿರೀಕ್ಷೆಯಿಂದ ನೀಡಿದ ವಿನಾರಳಿತ ಸೌಲಭ್ಯ. ಬ್ಯಾಂಕಿನ ಈ ವಾದವನ್ನು ಉಚ್ಚ ನ್ಯಾಯಾಲಯ ನಿರಾಕರಿಸಿತು.

4 ಮೋರ್ವಿ ಮರ್ಕಂಟೈಲ್ ಬ್ಯಾಂಕ್ ವಿರುದ್ಧ ಭಾರತದ ಒಕ್ಕೂಟ—ಈ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪನ್ನು (ಎ. ಐ. ಆರ್. 1965 ಎಸ್. ಸಿ. 1954) ಉಲ್ಲೇಖಿಸುತ್ತಾ, ಭಾರತದ ಕಾನೂನಿನ ಪ್ರಕಾರ ಸಾಗಿಗೆ ರಶೀತಿಗಳನ್ನು ಅವು ಒಳಗೊಳ್ಳುವ ಸರಕುಗಳೊಂದಿಗೆ ಸಮೀಕರಿಸಲಾಗುವುದೆಂದು ನ್ಯಾಯಾಲಯ ನಿರ್ಣಯಿಸಿತು. ಅದು ಸರಕಿನ ಹಕ್ಕುಗಳ ದಸ್ತಾವೇಜಾಗಿದೆ. ಆದುದರಿಂದ ಸದರಿ ದಸ್ತಾವೇಜುಗಳನ್ನು ಪ್ರತಿಫಲಕ್ಕಾಗಿ ವರ್ಗಾಯಿಸುವುದು ಸರಕುಗಳ ಸಾಂಕೇತಿಕ ಬಟವಾಡೆಯಾಗಿ ನೆರವೇರಿಕೆಯಾಗುತ್ತದೆ. ಆಮೇಲೆ ನ್ಯಾಯಾಲಯ ಎಂ. ಎಲ್. ಟ್ಯಾನನ್ನರ "ಭಾರತದಲ್ಲಿ ಬ್ಯಾಂಕಿಂಗ್ ಕಾನೂನುಗಳು ಮತ್ತು ಆಚರಣೆ" (ಪುಟ 374, 16ನೇ ಆವೃತ್ತಿ) ಎಂಬ ಪುಸ್ತಕವನ್ನು ಉಲ್ಲೇಖಿಸಿತು. ಅಲ್ಲಿ "ದಸ್ತಾವೇಜು ಸಹಿತವಾದ ಅಥವಾ ಇತರ ಹುಂಡಿಗಳು" ಎಂಬ ಶೀರ್ಷಿಕೆಯಡಿಯಲ್ಲಿ ಈ ರೀತಿ ಹೇಳಲಾಗಿದೆ: "ರೈಲ್ವೆ ರಸೀತಿ ಇತ್ಯಾದಿಗಳಂಥ ಸರಕು ಹಕ್ಕುಪತ್ರಗಳನ್ನು ಲಗತ್ತಿಸಲಾದ ದಸ್ತಾವೇಜು ಹುಂಡಿಗಳಿದ್ದಾಗ ಕಕ್ಷಿಗಳ ಪ್ರತ್ಯಯದ ಬಗ್ಗೆ ಬ್ಯಾಂಕರರು ಕೂಲಂಕಷವಾದ ವಿಚಾರಣೆಗಳನ್ನು ಮಾಡ

ಬೇಕಾದ ಅಗತ್ಯವಿಲ್ಲ. ಏಕೆಂದರೆ ಗ್ರಹೀತ ಒಂದು ಪಕ್ಷ ಅನಾದರಣೆ ಮಾಡಿದಲ್ಲಿ ಅಥವಾ ರಚಕನಿಂದ ಯಾವುದೇ ಸಂದರ್ಭದಲ್ಲಿ ಮೊಬಲಗನ್ನು ಪಡೆಯಲು ಕಷ್ಟವಾದಲ್ಲಿ, ಸರಕುಗಳನ್ನು ಮಾರಬಹುದು ಮತ್ತು ಇದರಿಂದ ಬ್ಯಾಂಕರನಿಗೆ ನಷ್ಟದ ಸಂಭವ ಕನಿಷ್ಠಗೊಳ್ಳುತ್ತದೆ."

5 ಬ್ಯಾಂಕಿಂಗ್ ಕಾನೂನುಗಳ ಉಪಬಂಧಗಳನ್ನು ಉಲ್ಲೇಖಿಸುತ್ತಾ ನ್ಯಾಯಾಲಯ ಈ ರೀತಿ ಹೇಳಿತು: "ವಾಯಿದೆಯ ದಿನದಂದು ಹುಂಡಿಗಳನ್ನು ವಸೂಲಿಮಾಡಿ, ಆ ಮೊಬಲಗನ್ನು ಖಾತೆಗೆ ಧನಿಕೆ ಮಾಡಬೇಕೆಂದು ಬ್ಯಾಂಕರನಿಗೆ ಅವನ ಗ್ರಾಹಕ ಹುಂಡಿಗಳನ್ನು ನೀಡಿದ್ದರೆ, ಆಗ ಅದನ್ನು 'ವಸೂಲಿಗಾಗಿರುವ ಹುಂಡಿಗಳು' ಎನ್ನಲಾಗುವುದು. ಇದು 'ಪರಕ್ರಾಮಿತ ಹುಂಡಿಗಳು' ಅಥವಾ 'ವಟಾಯಿಸಿದ ಹುಂಡಿಗಳು' ಎಂಬ ಪದಕ್ಕಿಂತ ಭಿನ್ನವಾಗಿದೆ, ಮತ್ತು ಬ್ಯಾಂಕರ್ ಅವಕ್ಕೆ ತಕ್ಷಣ ಮೌಲ್ಯ ಸಂದಾಯ ಮಾಡಿದಂಥ ಹುಂಡಿಗಳಾಗಿವೆ." ಬ್ಯಾಂಕರ್ ವಟಾವಣೆದಾರನಾಗಿ ಪೂರ್ಣ ಮೌಲ್ಯಕ್ಕೆ ಧಾರಕನಾಗಿರುತ್ತಾನೆ ಮತ್ತು ಅದರ ಮೇಲೆ ಪರಮಹಕ್ಕನ್ನು ಪಡೆಯುತ್ತಾನೆ. ಈ ಸಂದರ್ಭದಲ್ಲಿ ನ್ಯಾಯಾಲಯ ಶೆಲ್ಡನ್ನನ ಬ್ಯಾಂಕಿಂಗ್ ಆಚರಣೆ ಮತ್ತು ಕಾನೂನು ಎಂಬ ಪುಸ್ತಕವನ್ನು ಉಲ್ಲೇಖಿಸಿತು ಮತ್ತು ಅವಲಂಬಿಸಿತು. (10ನೆಯ ಆವೃತ್ತಿ, 306ನೆಯ ಪುಟ) ಅಲ್ಲಿ "ಹುಂಡಿಯ ವಟಾವಣೆ" ಎಂಬುದನ್ನು, ಹುಂಡಿಯನ್ನು ಖರೀದಿಸುವ ಅರ್ಥದಲ್ಲಿ ಬಳಸಲಾಗಿದೆ. ಇದರ ಫಲಿತಾರ್ಥವೆಂದರೆ, ಅದರ ವರ್ಗ ಪಡೆದವನಾಗುವುದಾಗಿದೆ. ವಟಾವಣೆದಾರ ತನ್ನಿಚ್ಛೆ ಬಂದಂತೆ ಹುಂಡಿಯ ಬಗ್ಗೆ ವ್ಯವಹರಿಸಬಹುದು ಮತ್ತು ಅದನ್ನು ತ್ಯಜಿಸಬಹುದು. ಹುಂಡಿಯ ಮೇಲಿನ ಅವನ ಹಕ್ಕು ಮತ್ತು ಅದಕ್ಕೆ ಸಂಬಂಧಿಸಿದಂತೆ ದಾವೆ ಹೂಡುವುದು ನಿರುಪಾಧಿಕ ಮತ್ತು ಅದರ ಪೂರ್ಣ ಮುಖಮೌಲ್ಯವನ್ನು ಒಳಗೊಳ್ಳುತ್ತದೆ. ಹುಂಡಿಯ ಯಾವುದೇ ಅಂಶಕ್ಕೆ ಅಥವಾ ಅದರ ಹುಟ್ಟುವಳಿಗೆ, ಹಿಂದಿನ ಧಾರಕನಿಗೆ ಬ್ಯಾಂಕರ್ ಕೇವಲ ನ್ಯಾಸಧಾರಿಯಾಗಿರುವುದಿಲ್ಲ.

ಮುಂದೆ ನ್ಯಾಯಾಲಯ 1881ರ ಪರಕ್ರಾಮ್ಯ ಸಂಲೇಖಗಳ ಅಧಿನಿಯಮದ 50ನೆಯ ಪ್ರಕರಣವನ್ನು ಉಲ್ಲೇಖಿಸಿತು. ಅದು ಸ್ಪಷ್ಟವಾಗಿ ಹೀಗೆ ವಿಧಿಸುತ್ತದೆ: "ಪರಕ್ರಾಮ್ಯ ಸಂಲೇಖದ ಹಿಂಬರಹ ಮತ್ತು ಅದರ ಬಟವಾಡೆ, ಇದರಿಂದಾಗಿ ಅನಂತರ ಪರಕ್ರಾಮಣದ ಹಕ್ಕೂ ಸೇರಿದಂತೆ, ಅದರ ಸ್ವಾಮ್ಯವನ್ನು ಹಿಂಬರಹ ಪಡೆದವನಿಗೆ ವರ್ಗಾಯಿಸುತ್ತದೆ." ಸಂಲೇಖದ ಹಕ್ಕನ್ನು ಪಡೆದಿರುವುದು, ಧಾರಕ ಅಸಂಲೇಖದ ಒಡೆಯನಾಗಿರುತ್ತಾನೆ ಎಂಬುದಕ್ಕೆ ಮೊದಲ ನೋಟದ ಪುರಾವೆಯಾಗಿರುತ್ತದೆ ಎಂದು ನ್ಯಾಯಾಲಯ ಎತ್ತಿಹಿಡಿಯಿತು. ಜೊತೆಗೆ ನ್ಯಾಯಾಲಯ ಹೀಗೂ ಹೇಳಿತು: "ರಚಕ ಹಾಜರುಪಡಿಸಿದ ಹುಂಡಿ ಮತ್ತು ಸಂಬಂಧಿಸಿದ ದಸ್ತಾವೇಜುಗಳಿಗೆ ತನ್ನ ಪರವಾಗಿ ಹಿಂಬರಹ ಪಡೆದು ಅವನು ಸ್ವೀಕರಿಸಿದ ಮತ್ತು ಹುಂಡಿಯ ವಸೂಲಿಗಾಗಿ ಕಾಯದೆ ವಟಾವಣೆ ಮಾಡಿ ಹಾಜರುಪಡಿಸಿದ ಹುಂಡಿಯ ಪೂರ್ಣ ಮೊಬಲಗನ್ನು ಧನಿಸಿದರೆ, ಆಗ ಬ್ಯಾಂಕರ್ ಖರೀದಿದಾರ ಮತ್ತು ಪೂರ್ಣಮೌಲಕ್ಕೆ ಧಾರಕನಾಗುತ್ತಾನೆ. ನಾನಾ ಸಾಕ್ಷಿಗಳ ಪುರಾವೆಗಳನ್ನು ಪರಿಶೀಲಿಸಿದ ಅನಂತರ, ಮೊಕದ್ದಮೆಯ ವಾಸ್ತವಾಂಶಗಳಿಂದ ಬ್ಯಾಂಕು, ವಾದಿಕಂಪನಿ ಹಾಜರುಪಡಿಸಿದ ಹುಂಡಿಗಳಿಗೆ ಕೇವಲ ವಸೂಲಿ ಅಭಿಕರ್ತೃ ಮಾತ್ರವಲ್ಲದೆ ಗ್ರಹೀತನಿಂದ ವಸೂಲಿಗಾಗಿ ಕಾಯದೆ, ಹಾಜರುಪಡಿಸಿದ ಹುಂಡಿಗಳನ್ನು ತತ್‌ಕ್ಷಣ ವಟಾಯಿಸಿ ವಾದಿಯ ಖಾತೆ, ಜಮೆಮಾಡಿದೆ ಎಂಬುದಾಗಿ ನ್ಯಾಯಾಲಯ ತೀರ್ಮಾನಿಸಿತು. ಹೀಗೆ ಬ್ಯಾಂಕರ್ ಹಕ್ಕು ದಾಖಲೆಗಳ "ಖರೀದಿದಾರ"ನಾಗುತಾನೆ ಮತ್ತು ಅದರ ಪೂರ್ಣ ಮೌಲ್ಯಕ್ಕೆ ಧಾರಕನಾಗುತ್ತಾನೆ. ಆದುದರಿಂದ ಗ್ರಹೀತನಿಂದ ಹುಂಡಿಗಳ ಮೊಬಲಗನ್ನು ವಸೂಲು ಮಾಡುವ ಮತ್ತು ತನಗೆ ತಾನೆ ಪುನರ್‌ಭರಿಸಿಕೊಳ್ಳುವ ಹಾಗೂ ಗ್ರಹೀತ ನಿರಾಕರಿಸಿದಲ್ಲಿ ದಾಖಲೆಗಳನ್ನು ಮರಳಿ ರಚಕನಿಗೆ ಹಾಜರುಪಡಿಸಿ, ಮೌಲ್ಯವನ್ನು ವಸೂಲಿ ಮಾಡಿಕೊಳ್ಳುವ ಜವಾಬ್ದಾರಿ ಬ್ಯಾಂಕರನದಾಗಿರುತ್ತದೆ ಎಂದು ನ್ಯಾಯಾಲಯ ನೀಡಿತು.

ಆದ್ದರಿಂದ ರಚಕನಿಗೆ ದಾಖಲೆಗಳನ್ನು ವಾಪಸ್ಸು ಮಾಡದೆ ದನಿಕೆ ನಮೂದನ್ನು ವಿಪರ್ಯಯ ಮಾಡುವುದಕ್ಕೆ ಬ್ಯಾಂಕಿಗೆ ಹಕ್ಕಿಲ್ಲವೆಂದು ನ್ಯಾಯಾಲಯ ತೀರ್ಪು ನೀಡಿತು. ಬರ್ಹಾಂಪುರದ ತಪತಿ ಗಿರಣಿಗೆ ರೂ. 77,975-50ಕ್ಕೆ ಬ್ಯಾಂಕು ಹೊಣೆಯಾಗಿದೆ ಎಂದು ನಿರ್ಣಯಿಸಲಾಯಿತು. ಅಂತೆಯೇ ಬ್ಯಾಂಕು ಸಲ್ಲಿಸಿದ್ದ ಅಪೀಲನ್ನು ವಜಾ ಮಾಡಲಾಯಿತು.

# ಬ್ಯಾಂಕರುಗಳಿಗೆ ಅರ್ಥಶಾಸ್ತ್ರ ಶಿಕ್ಷಣ*

ಮೂಲ : ಸ್ಟಾನ್ ಮೇಕ್ರಾಫ್ಟ್, ಎಐಬಿ

ಅನುವಾದ : ಟಿ. ಕೆ. ರಂಗನಾಥ, ಡಿ. ಕುಮಾರ್, ಪಾ. ರಾಜಗೋಪಾಲ, ಮೋ. ಕೃ. ಅನಂತಸ್ವಾಮಿ, ಸಿ. ಎಂ. ಶಾಂತವೀರಯ್ಯ, ಬಿ. ನಾಗಯ್ಯ ಶೆಟ್ಟಿ, ಜನಾರ್ದನ ತುಂಗ, ಬಿ. ಕಾ. ಮೂರ್ತೀಶ್ವರಯ್ಯ, ಕೆ. ಎನ್. ಮಹಾಬಲ, ಬಿ. ವಿ. ಚಂದ್ರಮೌಳಿ, ಜಿ. ಎಸ್. ನರಸಿಂಹಮೂರ್ತಿ, ಅ. ಚ. ಅಶೋಕಕುಮಾರ

ಅರ್ಥಶಾಸ್ತ್ರ ಸಂಘ ಕಳೆದ ವರ್ಷದ ಜನವರಿ ತಿಂಗಳ ಆದಿಭಾಗದಲ್ಲಿ ಎಡಿನ್‌ಬರೊದಲ್ಲಿ ಏರ್ಪಡಿಸಿದ್ದ "ವೃತ್ತಿ ಹಾಗೂ ಪ್ರವೃತ್ತಿಪರ ವಿದ್ಯಾಭ್ಯಾಸ" ಸಮ್ಮೇಳನದಲ್ಲಿ ನೀಡಲಾದ ಲೇಖನದ ಸಂಕ್ಷಿಪ್ತ ರೂಪ. ತರುಣ ಬ್ಯಾಂಕರುಗಳು ಬಹುಶಃ ಆಗಿಂದಾಗ್ಗೆ ಕೇಳುವ "ಅರ್ಥಶಾಸ್ತ್ರವನ್ನೇಕೆ ಅಭ್ಯಸಿಸಬೇಕು" ಎಂಬ ಪ್ರಶ್ನೆಗೆ ಉತ್ತರವನ್ನು ನೀಡುತ್ತದೆ.

ನಾನು ಪ್ರಥಮತಃ ಅರ್ಥಶಾಸ್ತ್ರದ ಬೋಧನೆಯಲ್ಲಿ ತೊಡಗಿದವನಲ್ಲ ಎಂಬುದು ನನಗೆ ಹರ್ಷದ ಸಂಗತಿ. ಇಂಥವರು ನೀಡುವ ಸೇವೆ ಕೃತಜ್ಞತೆ ದೊರಕಿಸದಂಥದು. ಅವರು ಮಾಡಿಕೊಳ್ಳುವ ಪ್ರವಚನ ಟಿಪ್ಪಣಿಗಳು ಹತ್ತಕ್ಕಿಂತ ಹೆಚ್ಚು ವರ್ಷ ತಾಳುವುದಂತಿರಲಿ, ವಾರವೊಂದರಲ್ಲಿ ಅವರ ಟಿಪ್ಪಣಿಗಳು ಹಳತೆನಿಸಿ, ಪುನರ್ವಿಮರ್ಶಿತಗೊಳ್ಳದಿದ್ದಲ್ಲಿ ಅವರು ಅದೃಷ್ಟವಂತರೇ ಸರಿ. ಆರ್ಥಿಕ ಚಿಂತನೆಯ ವಿಕಾಸದೊಡನೆ ನಡೆಯುತ್ತಾ ಹೋಗುವುದು ಸುಲಭವೇನಲ್ಲ. ಅದನ್ನು ಅರಗಿಸಿಕೊಳ್ಳುವುದಂತೂ ಇನ್ನೂ ಕಠಿಣ. ಹೊಸ ವಿಚಾರಗಳನ್ನು–ನಮಗೆ ಇಲ್ಲಿ ಸಂಬದ್ಧವಾದ ತರಬೇತಿಯ ಮಟ್ಟಕ್ಕೆ ನಾಜೂಕಿನದೆನಿಸುವಂಥ ಹೊಸ ವಿಚಾರಗಳನ್ನು ಕೂಡ–ಪ್ರವೀಣ ಅಧ್ಯಾಪಕ ಗುರುತಿಸಬೇಕು ಮತ್ತು ಪರಿಗಣಿಸಬೇಕು. ಜೊತೆಗೆ ಅಧಿಕೃತ ಧೋರಣೆಗಳಲ್ಲಿಯು, ಹಾಗೂ ಸಾಂಸ್ಥಿಕ ಸ್ವರೂಪಗಳಲ್ಲಿ ಆಗುವ ಬದಲಾವಣೆಗಳು ಯಾವುದೇ ಪಠ್ಯಪುಸ್ತಕವನ್ನು, ಅದು ಪ್ರಕಟವಾಗುವ ಮೊದಲೇ, ಹಳತುಪಡಿಸುತ್ತದೆ. ಬದಲಾಗುತ್ತಿರುವ ಮರಳ ರಾಶಿಯಂತಿರುವ ದತ್ತಾಂಶದ ತಳಹದಿಯಿಂದ ಪ್ರಚಲಿತ ಆರ್ಥಿಕ ಪರಿಸ್ಥಿತಿಯ ಬಗ್ಗೆ ಸರಳ ಮೌಲ್ಯಮಾಪನವನ್ನು ಯಾವುದೇ ಪ್ರಮಾಣದ ಆತ್ಮವಿಶ್ವಾಸದೊಡನೆ ಮಾಡಲಾಗುವುದಿಲ್ಲ.

ಅರ್ಥಶಾಸ್ತ್ರ ಅಧ್ಯಯನದ ಆವಶ್ಯಕತೆಯ ಪರವಾದ ಮೂಲಭೂತವಾದ ವಾದವೊಂದನ್ನು ಬೇರೊಂದೆಡೆ ಕೊಡ

* Economics Education for Bankers, Stan Maycraft, A.I-B. *Journal of the Institute of Bankers* (London), vol. 100, Part III, June 1979

ಲಾಗಿದೆ.[1] ಆದರೆ ಬ್ಯಾಂಕರರಿಗೆ ನಿರ್ದಿಷ್ಟವಾಗಿ ಪರಿಣಾಮ ಬೀರುವಂಥ ಅಂಶಗಳತ್ತ ಗಮನ ಸೆಳೆಯಬಯಸುತ್ತೇನೆ.

ಬ್ಯಾಂಕರರ ಹಾಗೂ ಗ್ರಾಹಕರ ನಡುವೆ ಸಾಂಪ್ರದಾಯಿಕವಾಗಿರುವ ನಿಕಟಸಂಬಂಧ ಬ್ಯಾಂಕರನಿಗೆ ಆರ್ಥಿಕ ಜ್ಞಾನದ ಹಿನ್ನೆಲೆಯ ಅರಿವಿನ ಆವಶ್ಯಕತೆಯನ್ನುಂಟು ಮಾಡುತ್ತದೆ. ಅವನಿಗೆ ಈ ಅಧ್ಯಯನದಿಂದ ಗ್ರಾಹಕರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತೆ ಗ್ರಾಹಕರು ಕೆಲಸ ಮಾಡುವಲ್ಲಿರುವ ನಿರ್ಬಂಧಗಳ ಅರಿವು ಆಗುತ್ತದೆ. ಪ್ರಚಲಿತ ಪ್ರಾಮುಖ್ಯದ ವಿಷಯಗಳ ಬಗ್ಗೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಹಾಗೂ ವ್ಯವಹಾರ ಪ್ರವೃತ್ತಿಗಳ ಮುಂಗಾಣ್ಕೆಯ ದೃಷ್ಟಿಯನ್ನು ತಳೆಯಲು ಸಮರ್ಥನಾದ ವ್ಯಕ್ತಿಯೆಂಬಂತೆ ತನ್ನನ್ನು ತೋರ್ಪಡಿಸಿಕೊಳ್ಳಲು[2] ಅವನಿಗೆ ಸಹಾಯ ಮಾಡುತ್ತದೆ. ತನ್ನ ಉದ್ಯೋಗದಾತನು ಅರ್ಥವ್ಯವಸ್ಥೆಯಲ್ಲಿ ವಹಿಸುತ್ತಿರುವ ಪ್ರಮುಖ ಹಾಗೂ ಸಂಕೀರ್ಣವಾದ ಪಾತ್ರವನ್ನು ಅರಿಯಲು ಮತ್ತು ಕೆಲವು ವೇಳೆ ವಿವರಿಸಲು ಸಹಾಯ ಮಾಡುತ್ತದೆ.

ಈ ಪ್ರಬಂಧವನ್ನು ಬ್ಯಾಂಕರರ ತರಬೇತಿಯಲ್ಲಿ ಅರ್ಥಶಾಸ್ತ್ರದ ಕೊಡುಗೆಯನ್ನು ಚರ್ಚಿಸುವುದಕ್ಕಷ್ಟಕ್ಕೇ ಸೀಮಿತಗೊಳಿಸಲಾಗಿದೆ. ಈ ಉದ್ದೇಶಕ್ಕೆ ಬ್ಯಾಂಕರ್ ಎಂದರೆ ಬ್ಯಾಂಕಿಂಗ್‌ಅನ್ನು ತಮ್ಮ ಜೀವನ ವೃತ್ತಿಯನ್ನಾಗಿ ಮಾಡಿಕೊಂಡಿರುವವರು. ಮಾಡಿಕೊಳ್ಳುವ ಉದ್ದೇಶವುಳ್ಳವರು. ಈ ವ್ಯಾಖ್ಯೆ ಬ್ಯಾಂಕುಗಳಲ್ಲಿ ಕೆಲಸ ಮಾಡುವ ಹಲವರನ್ನು ಹೊರತುಪಡಿಸುತ್ತದೆ. ಬ್ಯಾಂಕರರ ಇನ್‌ಸ್ಟಿಟ್ಯೂಟಿನ ಸದಸ್ಯರಾದ ಪ್ರಮುಖ ತೀರುವೆ ಬ್ಯಾಂಕುಗಳ ಸಿಬ್ಬಂದಿಯ ಸಂಖ್ಯೆಯ ದೃಷ್ಟಿಯಿಂದ ಪರಿಶೀಲಿಸಿದಾಗ ಬ್ಯಾಂಕಿಂಗನ್ನು ಜೀವನ ವೃತ್ತಿಯನ್ನಾಗಿ ಆರಿಸಿಕೊಂಡವರ ಪ್ರಮಾಣ ಮೂರನೆಯ ಒಂದರಷ್ಟಿರಬಹುದು. ಅರ್ಥಶಾಸ್ತ್ರವನ್ನು ಹಲವು ಕಾರಣಗಳಿಗಾಗಿ ಅಧ್ಯಯಿಸಬಹುದಾದರೂ ಹುದ್ದೆಗೆ ಸಂಬಂಧಿಸಿದಂತೆ ಮಾತ್ರ ಇಲ್ಲಿ ಚರ್ಚಿಸಲಾಗಿದೆ.

## ಹುದ್ದೆ ಪೂರ್ವ ಶಿಕ್ಷಣ

ಬ್ಯಾಂಕಿಂಗ್ ಹುದ್ದೆಗೆ, ಶಾಲಾ ಮಕ್ಕಳ ವಿದ್ಯಾಭ್ಯಾಸದಲ್ಲಿ ಅರ್ಥಶಾಸ್ತ್ರ ಯಾವ ಪಾತ್ರವನ್ನು ನಿರ್ವಹಿಸಬಹುದೆಂಬುದನ್ನು ನಾವು ಇಲ್ಲಿ ಪ್ರಥಮವಾಗಿ ಪ್ರಶ್ನಿಸಬೇಕಾಗಿದೆ. ಇದಕ್ಕೆ ಉತ್ತರ: ಅದು ಪ್ರಯೋಜನಕಾರಿಯಾದುದಾದರೂ ಅಗತ್ಯವಲ್ಲವೆಂದು ತೋರಬಹುದು. ಬ್ಯಾಂಕುಗಳು ತಮ್ಮ ನೇಮಕಾತಿ ನೀತಿಯಲ್ಲಿ ಅರ್ಥಶಾಸ್ತ್ರದ ಜ್ಞಾನಕ್ಕೆ ಹೆಚ್ಚಿನ ಪ್ರಾಮುಖ್ಯ ನೀಡುವುದಿಲ್ಲ. ಇಂಗ್ಲಿಷ್ ಭಾಷಾ ಸಾಮರ್ಥ್ಯ ಮತ್ತು ಒಂದು ಪರಿಮಾಣಾತ್ಮಕ ವಿಷಯ, ಅನಂತರ, ಉದಾಹರಣೆಗೆ ಇತಿಹಾಸ, ಇಂಗ್ಲಿಷ್ ಸಾಹಿತ್ಯ, ಒಂದು ವಿಜ್ಞಾನ—ಇವಕ್ಕಿಂತ ಯಾವುದೇ ಹೆಚ್ಚಿನ ಪ್ರಾಮುಖ್ಯ ಅರ್ಥಶಾಸ್ತ್ರಕ್ಕೆ ಇಲ್ಲದಂತಹ ವಿಶಾಲ ತಳಹದಿಯ ಶ್ರೇಣಿ, ಇವು ಅಗತ್ಯವಾದ ಶೈಕ್ಷಣಿಕ ಅರ್ಹತೆಗಳು. ಅಂತರರಾಷ್ಟ್ರೀಯ ಬ್ಯಾಂಕಿಂಗ್‌ನಲ್ಲಿ ಒಂದು ಅಥವಾ ಹೆಚ್ಚು ವಿದೇಶಿ ಭಾಷೆಗಳು ಅರ್ಥಶಾಸ್ತ್ರಕ್ಕಿಂತ ಉಪಯೋಗವಾಗುತ್ತವೆ.

ವಿಶ್ವವಿದ್ಯಾನಿಲಯ, ವೃತ್ತಿ ಶಿಕ್ಷಣ ಸಂಸ್ಥೆಗಳು ಹಾಗೂ ಕಾಲೇಜುಗಳಿಂದ ಬ್ಯಾಂಕುಗಳು ಪದವೀಧರರನ್ನು ನೇರವಾಗಿ ತೆಗೆದುಕೊಳ್ಳಬಹುದು. ಈ ವಿಶಿಷ್ಟ ಪ್ರವೇಶಿಗಳನ್ನು ವಿಭಿನ್ನ ಶಿಕ್ಷಣ ಶಾಖೆಗಳಿಂದ ತೆಗೆದುಕೊಳ್ಳಲಾಗಿರುತ್ತದೆ. ಇವರಲ್ಲಿ ಕೆಲವರು ಅರ್ಥಶಾಸ್ತ್ರದಲ್ಲಿ ಪದವಿ ಪಡೆದಿರುತ್ತಾರೆ. ಆದರೆ ಇದಕ್ಕೆ ಯಾವ ವಿಶೇಷ ಪ್ರಾಮುಖ್ಯವೂ ಇಲ್ಲ.ಅನೇಕ ಬ್ಯಾಂಕುಗಳು ಪದವಿ ಮಟ್ಟದಲ್ಲೇ ಶಿಕ್ಷಣ ಕ್ರಮಗಳನ್ನು ಸಂಚಾಲಿಸುತ್ತವೆ.ಉದಾಹರಣೆಗೆ ಲೋಬರ್ಗ್ ವಿಶ್ವವಿದ್ಯಾನಿಲಯದಲ್ಲಿ ಬ್ಯಾಂಕಿಂಗ್ ಮತ್ತು ಹಣಕಾಸಿನ ಬಗ್ಗೆ ಸಂಬಂಧಪಟ್ಟ ವಿಷಯಗಳಿರುವುದರ ಬಗ್ಗೆ ಮಿಡ್‌ಲ್ಯಾಂಡ್ ಬ್ಯಾಂಕು ಆಸಕ್ತಿ ವಹಿಸುತ್ತದೆ. ಅದು ವಿಶಾಲವಾದ ತಳಹದಿಯನ್ನು ಹೊಂದಿದೆ. ಆದರೆ ಅರ್ಥಶಾಸ್ತ್ರದ ಪೂರ್ವಜ್ಞಾನದ ಅಗತ್ಯವಿರುವುದಿಲ್ಲ. ಇದೇ ರೀತಿಯ ಶಿಕ್ಷಣಕ್ರಮವನ್ನು, ಆದರೆ ಅಂತರರಾಷ್ಟ್ರೀಯ ಹಣಕಾಸಿಗೆ ಪ್ರಾಮುಖ್ಯ ನೀಡುವ ಕ್ರಮವೊಂದನ್ನು ಸಿಟಿ ವಿಶ್ವವಿದ್ಯಾನಿಲಯದಲ್ಲಿ ಆರಂಭಿಸಲಾಗಿದೆ.

ವಿಷಯದ ಆಯ್ಕೆಯನ್ನು ಮಾಡಿಕೊಳ್ಳಬೇಕಾಗಿ ಬರುವ ಸಮಯದಲ್ಲಿ ಅನೇಕ ವಿದ್ಯಾರ್ಥಿಗಳು ಬ್ಯಾಂಕಿಂಗ್ ಅನ್ನು ತಮ್ಮ ವೃತ್ತಿಯಾಗಿ ಮಾಡಿಕೊಳ್ಳಲು ತೀರ್ಮಾನಿಸಿರುತ್ತಾರೆಂಬುದು ಸಂದೇಹಾಸ್ಪದವಾದಾಗ್ಯೂ ಭಾವಿ ಬ್ಯಾಂಕರರು ಅರ್ಥಶಾಸ್ತ್ರವನ್ನು ಅಧ್ಯಯನದ ಒಂದು ವಿಷಯವನ್ನಾಗಿ ಆಯ್ಕೆಮಾಡಿಕೊಳ್ಳುವಂತೆ ಸಲಹೆ ಮಾಡುವುದು ಉಚಿತವಾಗಿದೆ. ಬ್ಯಾಂಕಿನ ಹಾಗೂ ಗ್ರಾಹಕರ ನಡುವಿನ ವ್ಯವಹಾರವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಅರ್ಥಶಾಸ್ತ್ರದ ಜ್ಞಾನ ಸಹಾಯಕವಾಗುವುದಷ್ಟೇ ಅಲ್ಲದೆ, ವೃತ್ತಿಪರ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವವರಿಗೆ ಸಹಕಾರಿಯಾಗಿದೆ.

---

1 "ಸಾಮಾನ್ಯ ಶಿಕ್ಷಣಕ್ಕೆ ಅರ್ಥಶಾಸ್ತ್ರದ ಕೊಡುಗೆ"—ಅರ್ಥಶಾಸ್ತ್ರ ಸಂಘದ ತಾತ್ಕಾಲಿಕ ಸಮಿತಿಯ ವರದಿ

2 ದಿನಾಂಕ 24-10-1978ರಂದು 'ದಿ ಟೈಮ್ಸ್' ಪತ್ರಿಕೆಯಲ್ಲಿ ಲೇಡಿವೂಟನ್ ಅವರ ಪತ್ರ ಎತ್ತಿದ ಪ್ರಶ್ನೆ—ಈ ಪ್ರಬಂಧವನ್ನು ಸಿದ್ಧಪಡಿಸುವಾಗ ಏಕಲಿಂಗಿ ಸರ್ವನಾಮವೊಂದರ ಆವಶ್ಯಕತೆಯ ಅರಿವು ನನಗೆ ಉಂಟಾಗಿದೆ. ಪ್ರಬಂಧದುದ್ದಕ್ಕೂ "ಅಥವಾ ಅವರು" ಮತ್ತು "ಅಥವಾ ಅವಳ" ಎಂದು ಮತ್ತೆ ಮತ್ತೆ ಬಳಸುವುದು ಒಡ್ಡೊಡ್ಡಾಗಿ ಕಾಣುವುದರಿಂದ ಈ ಪ್ರಬಂಧದಲ್ಲಿ ಪುಲ್ಲಿಂಗ ಸರ್ವನಾಮವನ್ನು ಸಂಕ್ಷಿಪ್ತರೂಪವೆಂಬಂತಲ್ಲದೇ ಬೇರೆ ಯಾವ ಕಾರಣಕ್ಕೂ ಬಳಸಿಲ್ಲ.

**ಸಹಸದಸ್ಯತ್ವದ ಪರೀಕ್ಷೆಗಳು**

ಬ್ರಿಟನ್ನಿನ ವಿದ್ಯಾರ್ಥಿಗಳಿಗೆ ಬ್ಯಾಂಕರರ ಸಂಸ್ಥೆಯ ಬ್ಯಾಂಕಿಂಗ್ ಡಿಪ್ಲೊಮ ಪರೀಕ್ಷೆಯ ಭಾಗ 1ನ್ನು ಈಗ ಸಲ್ಲಿಸಿರುವುದರಿಂದ ಬಿಸಿನೆಸ್ ಎಜುಕೇಷನ್ ಕೌನ್ಸಿಲ್ಲಿನಿಂದ ನೀಡಿದ ವ್ಯವಹಾರ ಅಧ್ಯಯನವನ್ನು (ಬೀಇಸಿ) ಅಥವಾ ಇದಕ್ಕೆ ಸರಿಸಮಾನವಾದುದನ್ನು "ಬಿ" ಮಟ್ಟದ ಇಂಗ್ಲಿಷ್ [illegible] ಮತ್ತು [illegible] 'ಎ' ಮಟ್ಟದ [illegible] [illegible] ಅಭ್ಯರ್ಥಿಗಳಿಗೆ ಹೊಸದಾದ ಸ್ಟೇಜ್ I ಪರೀಕ್ಷೆಯಲ್ಲಿ [illegible]. [illegible] ಅರ್ಥಶಾಸ್ತ್ರವನ್ನು [illegible]. [illegible] ಆಫ್ [illegible] ಪರೀಕ್ಷೆಗಳ ಮೂಲಕ [illegible] ತೆಗೆದುಕೊಳ್ಳಲಿ ಅಥವಾ ವ್ಯವಹಾರ ಅಧ್ಯಯನದಲ್ಲಿ [illegible] ಎಚ್ ಎನ್ ಸಿ/ಎಚ್ ಎನ್ ಡಿ ಪರೀಕ್ಷೆಗಳ ಮೂಲಕವೇ ಇದನ್ನು ತೆಗೆದುಕೊಂಡಿರಲಿ (ಅಥವಾ ಭವಿಷ್ಯದಲ್ಲಿ ಬೀಇಸಿಯ ಸಮನಾದುದಾಗಲಿ) ಆನ್ವಯಿಕ ಅರ್ಥಶಾಸ್ತ್ರ (ಹಣ ಅರ್ಥಶಾಸ್ತ್ರ) ಭಾಗ 'ಎ' ಸ್ಟೇಜ್ ಒಂದು ಅಂಗವಾಗಿದೆ. ಅರ್ಥಶಾಸ್ತ್ರ ಮೂರನೇ ಹಂತದ-ಹಣಕಾಸಿನ ಅಧ್ಯಯನದ ಡಿಪ್ಲೊಮ ಭಾಗವಾಗಿಲ್ಲ. ಆದರೆ ಬ್ಯಾಂಕಿಂಗ್ ಡಿಪ್ಲೊಮ ಪಡೆಯದೆಯೇ ಮಾನ್ಯತೆ ಪಡೆದ ಪದವಿ ಅಥವಾ ವೃತ್ತೀಯ ಅರ್ಹತೆ ಹೊಂದಿದವರು ನೇರವಾಗಿ ಹಣಕಾಸು ಅಧ್ಯಯನದ ಡಿಪ್ಲೊಮಕ್ಕೆ ಕಾಲಿಡಬಹುದು. ಅಂತಹ ಅಭ್ಯರ್ಥಿಗಳು, ವಿಷಯವಾರು ವಿನಾಯಿತಿ ದೊರೆಯದಿದ್ದರೆ, ಎರಡು ಪ್ರವೇಶ ಪತ್ರಿಕೆಗಳನ್ನು ತೆಗೆದುಕೊಳ್ಳಬೇಕು. ಇವುಗಳಲ್ಲಿ ಒಂದರ ವಿಷಯ ಹಣಕಾಸು ಸಂಸ್ಥೆಗಳು ಮತ್ತು ಹಣ ವ್ಯವಸ್ಥೆಯನ್ನು ಕುರಿತದ್ದಾಗಿರುತ್ತದೆ.

ಬ್ಯಾಂಕುಗಳು ಅರ್ಥಶಾಸ್ತ್ರಕ್ಕೆ ನೀಡಿರುವ ಪ್ರಾಮುಖ್ಯವನ್ನು ಅವು ವೃತ್ತಿಪರ ಪರೀಕ್ಷೆಗಳ ಪಠ್ಯಕ್ರಮದಲ್ಲಿ ಅರ್ಥಶಾಸ್ತ್ರವನ್ನು ಸೇರಿಸಿರುವುದರಿಂದ ಅಳೆಯಬಹುದಾಗಿದೆ. ಬ್ಯಾಂಕರರಿಗೆ ಅರ್ಥಶಾಸ್ತ್ರದ ಜ್ಞಾನವನ್ನು ಬೆಳೆಸಿಕೊಳ್ಳುವುದರಿಂದಾಗುವ ಉಪಯುಕ್ತತೆ ಅವರವರ ವೃತ್ತಿಗನುಸಾರವಾಗಿ ಬದಲಾಗುತ್ತದೆ. ಒಂದು ಕೊನೆಯಲ್ಲಿ, ಪ್ರಧಾನ ಕಛೇರಿಯ ವಿಶೇಷ ವಿಭಾಗಗಳಲ್ಲಿ ನಿಯುಕ್ತರಾದ ತಜ್ಞರು, ಅರ್ಥಶಾಸ್ತ್ರೀಯ ಬೆಳವಣಿಗೆಗಳು ಬ್ಯಾಂಕಿನ ಒಟ್ಟಾರೆ ವ್ಯವಹಾರದ ಮೇಲೆ ಮಾಡುವ ಪರಿಣಾಮಗಳನ್ನು ಅರ್ಥೈಸಲು ಸಮರ್ಥರಾಗಿರಬೇಕಾಗುತ್ತದೆ. ಮತ್ತೊಂದು ಕೊನೆಯಲ್ಲಿ ಶಾಖಾಬ್ಯಾಂಕರ್, ಸಮಗ್ರ ಆರ್ಥಿಕ ಪರಿಸರದಿಂದ ಶಾಖೆಯ ವ್ಯವಹಾರದ ಮೇಲೆ, ಅಂದರೆ ಹೆಚ್ಚಾಗಿ ತನ್ನ ಗ್ರಾಹಕರ ವ್ಯವಹಾರದ ಮೇಲೆ ಆಗುವ ಪರಿಣಾಮಗಳನ್ನು ಪರಿಶೀಲಿಸಬೇಕಾಗುತ್ತದೆ.

**ಆಂತರಿಕ ತರಬೇತಿ**

ಬ್ಯಾಂಕರನಿಗೆ ಕೆಲಸದಲ್ಲಿ ಔಪಚಾರಿಕ ಆರ್ಥಿಕ ತರಬೇತಿ ಏನನ್ನೂ ಕೊಡಲಾಗುವುದಿಲ್ಲ. ಆದರೆ ಪರಿಣತ ಬ್ಯಾಂಕರ್ ಸಾಮಾನ್ಯ ವ್ಯಾಸಂಗದಿಂದ ಹಾಗೂ ವೈಯಕ್ತಿಕ ಸಂಪರ್ಕಗಳಿಂದ ಮೂಲಭೂತ ಅರ್ಥಶಾಸ್ತ್ರ ಜ್ಞಾನವನ್ನು ರೂಪಿಸಿಕೊಳ್ಳಲು ಸಮರ್ಥನಾಗಿರುತ್ತಾನೆ. ಅವನ ವೃತ್ತಿಯ ಅಭಿವೃದ್ಧಿಯ ಒಂದು ಅಂಗವಾಗಿ ಅವನನ್ನು ಶಾಖೆಯಿಂದ ಶಾಖೆಗೆ ಮತ್ತು ಮುಖ್ಯ ಕಛೇರಿಯ ವಿವಿಧ ಇಲಾಖೆಗಳ ಒಳಗೂ ಹೊರಗೂ ವರ್ಗಾಯಿಸಲಾಗುತ್ತಿರುತ್ತದೆ. ಈ ವರ್ಗಾವಣೆಗಳ ಮುಖ್ಯ ಉದ್ದೇಶ ಅರ್ಥಶಾಸ್ತ್ರೀಯ ಅನುಭವವನ್ನು ಕೊಡುವುದಲ್ಲವಾದರೂ ಇಂಥ ವರ್ಗಾವಣೆಗಳಿಂದ ಬ್ಯಾಂಕರ್ ವಿಶಾಲವಾದ ಅರ್ಥಶಾಸ್ತ್ರೀಯ ಅನುಭವವನ್ನು ಪಡೆಯುತ್ತಾನೆ. ಸಾಧಾರಣವಾಗಿ ಬ್ಯಾಂಕುಗಳು ಸಿಬ್ಬಂದಿ ವರ್ಗವನ್ನು ಅವರದೇ ಆದ ಅರ್ಥಶಾಸ್ತ್ರ ಅಂಶಗಳ ವ್ಯಾಖ್ಯಾನವನ್ನು ಅವಲಂಬಿಸಿಕೊಳ್ಳಲು ಬಿಡದೆ ಅರ್ಥಶಾಸ್ತ್ರಜ್ಞರನ್ನು ನೇಮಿಸಿ ಸಿಬ್ಬಂದಿ ವರ್ಗದವರು ಅರ್ಥಶಾಸ್ತ್ರಜ್ಞರ ಅನುಭವದಿಂದ ತಮಗೆ ಬೇಕಾದ ಮಾಹಿತಿ, ಸಲಹೆ ಅಥವಾ ವ್ಯಾಖ್ಯಾನವನ್ನು ಪಡೆಯಲು ಸಹಾಯ ಮಾಡುತ್ತದೆ. ಆದರೂ ಕೆಲವು ಶಾಖಾವ್ಯವಸ್ಥಾಪಕರು ಸ್ಥಳೀಯ ಕೈಗಾರಿಕೆಗಳ ಬಗ್ಗೆ ವಿಸ್ತೃತ ಮಾಹಿತಿಯನ್ನು ಪಡೆದುಕೊಂಡಿರುತ್ತಾರೆಂದರೆ ಕೇಂದ್ರೀಕೃತ ಮತ್ತು ದೂರಸ್ಥ ಅರ್ಥಶಾಸ್ತ್ರ ಇಲಾಖೆಯಲ್ಲಿ ಸಾಧ್ಯವಾಗುವುದಕ್ಕಿಂತ ಹೆಚ್ಚಾಗಿ ಒಂದು ವಿಶಿಷ್ಟ ಸನ್ನಿವೇಶದ ಅಲ್ಪಾವಧಿ ನೋಟದ ಪರಿಚಯವನ್ನು ಪಡೆದಿರುತ್ತಾರೆ. ಇದರಿಂದ ಬ್ಯಾಂಕರ್ ಹಾಗು ಅರ್ಥಶಾಸ್ತ್ರಜ್ಞರ ನಡುವೆ ಪರಸ್ಪರ ಕ್ರಿಯೆಗಳು ಏನಾದರೂ ಒಮ್ಮುಖ ವ್ಯವಹಾರವಾಗಿರುವುದಿಲ್ಲ.

ಆದಾಗ್ಯೂ ತಿಳಿವಳಿಕೆ ಗಳಿಸುವಲ್ಲಿ ಮತ್ತು ಅದನ್ನು ಅನ್ವಯಗೊಳಿಸುವಲ್ಲಿ ಅಂತರವಿರಬಹುದು. ಇದಕ್ಕೆ ಮುಖ್ಯ ಕಾರಣವೆಂದರೆ ಬ್ಯಾಂಕರ್ ಪರೀಕ್ಷೆಗಾಗಿ ಗಳಿಸಿದ ಜ್ಞಾನವನ್ನು ನಿಯತವಾಗಿ ಉಪಯೋಗಿಸಿಕೊಳ್ಳುವ ಸ್ಥಾನವನ್ನು ತಲುಪುವುದಕ್ಕಿಂತ ಕೆಲಕಾಲ ಮುಂಚೆಯೇ ವೃತ್ತಿಪರ ಪರೀಕ್ಷೆಗಳನ್ನು ತೆಗೆದುಕೊಂಡಿರುವುದೇ ಆಗಿದೆ. ಕೆಲವು ವರ್ಷಗಳ ಹಿಂದೆ ಮುಖ್ಯವಾದವುಗಳೆಂದು ಪರಿಗಣಿಸಲಾಗಿದ್ದ ಅಂಶಗಳು ಅರ್ಥವ್ಯವಸ್ಥೆಯಲ್ಲಿಯ ಹಾಗೂ ಸಾಮಾಜಿಕ, ರಾಜಕೀಯ ತಾಂತ್ರಿಕ ಚೌಕಟ್ಟಿನಲ್ಲಿಯ ಬೆಳವಣಿಗೆಗಳು ಬಹುತೇಕ ಅಸಂಗತವೆಂದು ಮಾಡುತ್ತವೆ ಮತ್ತು ಆಗ ಪರಿಗಣಿಸದೆ ಇದ್ದ ಇತರ ವಿಷಯಗಳನ್ನು ಪ್ರಧಾನ ನೆಲೆಗೆ ತರುತ್ತವೆ. ನಿರ್ಧಾರಣಗಳನ್ನು ನಿರಂತರವಾಗಿ ಹಾಗೂ ಪ್ರಜ್ಞಾಪೂರ್ವಕವಾಗಿ ತಪಾಸಣೆಗೆ ಒಳಪಡಿಸದಿದ್ದರೆ ಅವು ತುಂಬಾ ವ್ಯಕ್ತಿನಿಷ್ಠವಾಗುವ ಸಾಧ್ಯತೆಯೂ ಇದೆ.

"ಪ್ರಚಲಿತ ವ್ಯವಹಾರ ಸ್ಥಿತಿಗಳು" ಎಂಬ ವಿಷಯವೊಂದನ್ನು ಉನ್ನತ ವ್ಯವಸ್ಥಾಪನ ಪೂರ್ವ ಶಿಕ್ಷಣ ಕ್ರಮದಲ್ಲಿ ಸೇರಿಸುವುದರ ಮೂಲಕ ಈ ಅಂತರವನ್ನು ತುಂಬಲು

ನಮ್ಮ ಬ್ಯಾಂಕಿನಲ್ಲಿ ನಾವು ಪ್ರಯತ್ನಿಸುತ್ತಿದ್ದೇವೆ. ಶಿಕ್ಷಣಾರ್ಥಿಗಳು ವ್ಯವಹಾರದ ಸನ್ನಿವೇಶಗಳನ್ನು ತಂಡಗಳಲ್ಲಿ ಅಭ್ಯಸಿಸಿ ಪ್ರಚಲಿತ ಪರಿಸರದ ರೂಪುರೇಷೆಗಳನ್ನು ಮತ್ತು ಅದರ ಅಲ್ಪಾವಧಿ ಅಭಿವೃದ್ಧಿಯ ಸಾಧ್ಯತೆಯ ಬಗ್ಗೆ ಸರ್ವಸಮ್ಮತವಾದ ವರದಿಗಳನ್ನು ತಯಾರಿಸಬೇಕಾಗುತ್ತದೆ. ಈ ಶಿಕ್ಷಣ ಕ್ರಮದ ಕೊನೆಯಲ್ಲಿ ಬ್ಯಾಂಕಿನ ಹಿರಿಯ ಅರ್ಥಶಾಸ್ತ್ರಜ್ಞರಲ್ಲಿ ಒಬ್ಬರು ತಂಡಗಳ ವರದಿಗಳನ್ನು ಬಹಿರಂಗ ಅಧಿವೇಶನವೊಂದರಲ್ಲಿ ಚರ್ಚಿಸುತ್ತಾರೆ. ಇದರಿಂದ ವರದಿಯಲ್ಲಿರುವ ದೌರ್ಬಲ್ಯಗಳು ಮತ್ತು ಸಾಮಾನ್ಯವಾಗಿ ತಪ್ಪಾಗಿ ತಿಳಿದುಕೊಳ್ಳಲಾಗಿದೆ ಎಂದು ತೋರುವ ವಿಷಯಗಳತ್ತ ಗಮನ ಸೆಳೆಯಲು ಅವರಿಗೆ ಅವಕಾಶ ದೊರಕುತ್ತದೆ.

ಯಾವ ತರದ ಅರ್ಥಶಾಸ್ತ್ರವನ್ನು ಕಲಿಸಬೇಕು? ಯಾವ ತರದ ಅರ್ಥಶಾಸ್ತ್ರವನ್ನು ಬ್ಯಾಂಕರರಿಗೆ ಕಲಿಸಬೇಕೆಂದು ಸ್ಪಷ್ಟವಾಗಿ ಸಂಕ್ಷೇಪವಾಗಿ ಮತ್ತು ಸರಿಯಾಗಿ ಹೇಳುವುದು ಸುಲಭವಲ್ಲ. ಅವರು ಮೂಲತಃ ವ್ಯಾವಹಾರಿಕ ಜನರಾಗಿದ್ದು, ಅಂಥವರಿಗೆ ದಿನನಿತ್ಯ ಬಳಕೆಯ ತರಬೇತಿ ಅಗತ್ಯವಾಗಿದೆ. ಅವರಿಗೆ ಮೂಲ ಅರ್ಥಶಾಸ್ತ್ರ ಸಿದ್ಧಾಂತ ಅಷ್ಟೊಂದು ಅಗತ್ಯವಿಲ್ಲ. ಆದರೆ ಈ ಹೇಳಿಕೆ ಆಕ್ಷೇಪಣೆಗೆ ತೆರೆದಿರುತ್ತದೆ. ಅದೇನೆಂದರೆ ಯಾವುದೇ ವ್ಯವಹಾರ ವಿಚಾರಗಳಿಗೆ ಹೆಚ್ಚುಕಡಿಮೆ ಯಾವುದಾದರೂ ಸಿದ್ಧಾಂತದ ಹಿನ್ನೆಲೆ ಮೂಲವಾಗಿರಬೇಕು; ಮತ್ತು ಯಾವ ವ್ಯಾವಹಾರಿಕ ಅಭಿಪ್ರಾಯಗಳಿಗೂ ಒಂದಲ್ಲ ಒಂದು ತರದ ತತ್ತ್ವದ ಹಿನ್ನೆಲೆ ಇದೆ. ಬ್ಯಾಂಕುಗಳು ವಿಶಾಲವಾದ ಪ್ರವೃತ್ತಿಗಳನ್ನು ಮತ್ತು ವಿಚಾರಗಳನ್ನೂ ಕೆಲವು ಸಂದರ್ಭಗಳಲ್ಲಿ ವಿವರಣೆಯ ಮೂಲ ಉದಾಹರಣೆಗಳನ್ನೂ ಇಲ್ಲಿ ತಿಳಿದುಕೊಳ್ಳುವ ಅಗತ್ಯವನ್ನು ಸೂಚಿಸಬಹುದು. ಅದರಿಂದ ಬ್ಯಾಂಕಿಗೆ ಅನುಕೂಲವಾಗಬಹುದು:

ಬ್ಯಾಂಕುಗಳು ತಮ್ಮ ಪ್ರತಿಕ್ರಿಯೆಗಳನ್ನ, ನಿಜಜೀವನದ ಅಂಶಗಳಿಗೆ ಸರಿಯಾಗಿಸುವುದಕ್ಕೆ ಒಂದು ಚೌಕಟ್ಟು ಅಗತ್ಯವಾಗಿದೆ. ಅರ್ಥವ್ಯವಸ್ಥೆ ಹೇಗೆ ಕೆಲಸಮಾಡುತ್ತದೆ ಅಥವಾ ಕೆಲಸಮಾಡಲು ಹೇಗೆ ವಿಫಲವಾಗುತ್ತದೆ? ವಿಭಿನ್ನ ಅಂಶಗಳ ನಡುವೆ ಅದರ ಸಂಬಂಧಗಳೇನು? ಎಂಬುದರ ವಿವರಣೆಯನ್ನು ತಿಳಿದುಕೊಳ್ಳುವುದು ಒಂದು ಪ್ರಮುಖ ಅಗತ್ಯವಾಗಿದೆ.

ಅದೂ ಅಲ್ಲದೆ ಅವನು ಯಾವುದು ತನಗಾಗಿಯೇ ಮುಖ್ಯವಾದುದು ಮತ್ತು ಯಾವುದು ಇತರ ಅಂಶಗಳ ಮೇಲೆ ಅದರ ಪರಿಣಾಮಗಳಿಂದ ಮಾತ್ರವೇ ಮುಖ್ಯ ಎಂಬುದರ ನಡುವಣ ವ್ಯತ್ಯಾಸವನ್ನು ಅರಿಯಲು ಕೂಡ ಅವನು ಸಮರ್ಥನಾಗಿರುವುದು ಅಗತ್ಯ. ಉದಾಹರಣೆಗೆ ವಿನಿಯೋಜನೆ ತಮಗಾಗಿಯೇ ವಿರಳ ಎಂದಾದರೆ ಉದ್ಯೋಗ ಮತ್ತು ಜೀವನಮಟ್ಟ ಮುಂತಾದ ಹೆಚ್ಚು ಮೂಲಭೂತವಾದ ವಿಷಯಗಳಲ್ಲಿ ಅದು ಹೊಂದಿರುವ ಪ್ರಭಾವದಿಂದಾಗಿ ನಾವು ಹಾಗೆ ಮಾಡಬೇಕು. ನಮ್ಮ ಪ್ರತಿಷ್ಠೆಯ ಸಂಕೇತವಾಗಿ ನಾವು ಈ ದೇಶದಲ್ಲಿ ಕಾರ್ಖಾನೆಗಳ ನಿರ್ಮಾಣ ಮಾಡುವುದು ವಿರಳ.

ಬ್ಯಾಂಕರನನ್ನು, ತಾನು ಆಚರಣೆಯಲ್ಲಿ ಎದುರಿಸದ ಊಹೆಗಳನ್ನು ಬಳಸಿಕೊಳ್ಳುವ ಅರ್ಥಶಾಸ್ತ್ರಕ್ಕೆ ಪರಿಚಯ ಮಾಡಿಸಿದರೆ ಬ್ಯಾಂಕರನ ಕಲ್ಪನೆ ಉದ್ದೀಪನಗೊಳ್ಳುವುದಿಲ್ಲ ಎಂಬುದು ಪರಿಗಣಿಸಬೇಕಾದ ಮತ್ತೊಂದು ವಿಷಯ. ಅರ್ಥಶಾಸ್ತ್ರವನ್ನು ಕೆಲವೊಮ್ಮೆ ಪರಿಪೂರ್ಣ ಪೈಪೋಟಿ ಮತ್ತು ಸಮಗ್ರ ಏಕಸ್ವಾಮ್ಯ ಎಂಬ ವಿಪರೀತವಾದ ಅತಿ ಊಹೆಯ ಮೇಲೆ ಕೆಲವೊಮ್ಮೆ ಬೋಧಿಸಲಾಗಿದೆ. ಆದರೆ ಇಂತಹ ಸನ್ನಿವೇಶಗಳು ಇದ್ದದ್ದೇ ಆದರೆ ಅವುಗಳು ವ್ಯವಹಾರ ಜೀವನದಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ, ಇವುಗಳನ್ನು ಅಪವಾದಗಳೆಂದೇ ಪರಿಗಣಿಸಬೇಕಾಗುತ್ತದೆ. ಅಂತೇ ಕೆಲವು ಕಂಪನಿಗಳು ತಮ್ಮ ಲಾಭವನ್ನು ಗರಿಷ್ಠಗೊಳಿಸಲು ಶ್ರಮಿಸಬಹುದಾದರೂ ಅಥವಾ ದೀರ್ಘಾವಧಿಯಲ್ಲಿ ಸಮತೋಲವನ್ನು ಸಾಧಿಸಲು ಶ್ರಮಿಸಬಹುದಾಗಿದ್ದರೂ, ಇವುಗಳು ವ್ಯವಹಾರಗಳನ್ನು ಕುರಿತ ನಿರ್ಣಯಗಳನ್ನು ಕೈಗೊಳ್ಳುವಾಗ ಸಾಮಾನ್ಯವಾಗಿ ಮುಖ್ಯ ಪರಿಗಣನೆಗಳಲ್ಲ.

ಅರ್ಥಶಾಸ್ತ್ರದ ಪರಿಭಾಷೆಯ ಉಪಯೋಗ ಮತ್ತೊಂದು ಸಮಸ್ಯೆಯಾಗಿದೆ. 'ಅವಕಾಶ ಬೆಲೆ' (ಆಪರ್ಚ್ಯುನಿಟಿ ಕಾಸ್ಟ್) ಮತ್ತು ಬಂಡವಾಳದ ಸೀಮಾಂತ ಉತ್ಪಾದನೆ (ಮಾರ್ಜಿನಲ್ ಪ್ರೊಡಕ್ಟಿವಿಟಿ ಆಫ್ ಕ್ಯಾಪಿಟಲ್) ಇಂತಹ ನುಡಿಗಟ್ಟುಗಳು ಅರ್ಥಶಾಸ್ತ್ರ ಪಂಡಿತರಿಗೆ ಉಪಯುಕ್ತವಾಗಿ ಮತ್ತು ಅವರಿಗೆ ಅನುಕೂಲಕರವಾದ ಸಂಕ್ಷಿಪ್ತ ರೂಪಗಳಾಗಿದ್ದಾಗ್ಯೂ ಅವು ಶ್ರೀಸಾಮಾನ್ಯನಿಗೆ ಗೊಂದಲವನ್ನುಂಟುಮಾಡುವ ಪ್ರವೃತ್ತಿಯವಾಗಿವೆ. ಬ್ಯಾಂಕರನಿಗೆ ಅಂತಹ ಪರಿಕಲ್ಪನೆಗಳ ಹಿಂದಿನ ಚಿಂತನೆಯು ಅರಿವಿರಬೇಕು. ಆದರೆ ಈ ವಿಚಾರಗಳನ್ನು ಮೂಲಭೂತವಾಗಿ ಪ್ರಯೋಗಯೋಗ್ಯವಾದ ಮಾತುಗಳಲ್ಲಿ ಜಾರಿಗೆ ತರಬೇಕು. ಆರ್ಥಿಕ ಚಿಂತನೆಯ ಪರಿಭಾಷೆಯ ನಿರ್ದಿಷ್ಟ ಘಟಕವೊಂದು ಈಗಾಗಲೇ ಜನಸಾಮಾನ್ಯರಲ್ಲಿ ಬಳಕೆಗೆ ಬಂದಿದೆಯೆ ಮತ್ತು ಹಾಗಿದ್ದರೆ ಅದು ತನ್ನ ಅರ್ಥವನ್ನು ಉಳಿಸಿಕೊಂಡಿದೆಯೆ ಎನ್ನುವುದನ್ನು ನಿರ್ಣಯಿಸುವುದು ಇಲ್ಲಿಯ ಸಮಸ್ಯೆ. ಹಣದುಬ್ಬರ, ಪಾವತಿ ಶಿಲ್ಕು ಹಾಗೂ ವಿನಿಯೋಜನೆ ಈ ಶಬ್ದಗಳನ್ನು ಜನಸಾಮಾನ್ಯರು ಬಳಸುತ್ತಿದ್ದಾರೆ. ಆದರೆ ಇವು ಯಾವಾಗಲೂ ಅರ್ಥಶಾಸ್ತ್ರದ ನಿರ್ದಿಷ್ಟ ಅರ್ಥದಲ್ಲಿಯೇ ಅಲ್ಲ.

ಒಂದು ಅಂತಿಮ ಅಂಶವನ್ನು ಇಲ್ಲಿ ಹೇಳಬೇಕು. ಬ್ಯಾಂಕರ್ ಸ್ಥೂಲ ಪ್ರವೃತ್ತಿಗಳ ಬಗೆಗೆ ಮಾತ್ರವೇ ಅರಿವನ್ನು ಹೊಂದಿರಬೇಕು ಎಂದು ಸಲಹೆ ಮಾಡುವುದು ಸರಳೀಕರಣ ಎನಿಸೀತು ಎಂದು ಈ ಮೊದಲು ಹೇಳಲಾಗಿತ್ತು. ಹೀಗಿದ್ದರೂ ಸ್ಥೂಲ ರೂಪುರೇಷೆಗಳನ್ನು ಮಾತ್ರವೇ ಕಟ್ಟುನಿಟ್ಟಾಗಿ ಬೋಧಿಸಬೇಕು, ವಿವರಗಳು

ಸ್ವಯಂಬೋಧವಾಗಬೇಕು. ಈ ಸಲಹೆಯನ್ನು ಮಾಡಲು ಪ್ರಮುಖ ಕಾರಣ, ವಿವರಗಳು ಸತತವಾಗಿ ಬದಲಾಗುತ್ತಿರುತ್ತವೆ. ಅದರಿಂದ ತಿಳಿವಳಿಕೆ ಆಗಾಗ ಹಳತಾಗುತ್ತದೆ ಎಂಬುದೇ ಆಗಿದೆ. ಮೇಲಾಗಿ ವಿವರಗಳ ಸಂಗ್ರಹಣೆ ಮಾಡುವ ಭರದಲ್ಲಿ ಅಡಕವಾಗಿರುವ ಮೂಲ ಪರಿಕಲ್ಪನೆಗಳ ಅರಿವನ್ನೇ ಬಿಟ್ಟುಕೊಡಲಾಗುತ್ತದೆ ಎಂದು ಆಗಾಗ ತೋರುತ್ತದೆ. ಜೊತೆಗೆ ಬೃಹತ್ ಪ್ರಮಾಣದ ವಿವರಗಳನ್ನು ಕಲಿತ ಒಬ್ಬ ವಿದ್ಯಾರ್ಥಿ ಅದಕ್ಕೆ ಸಂಬಂಧಿಸಿದ ಮಹತ್ವವನ್ನು ನಿರ್ಣಯಿಸುವಾಗ ಕಷ್ಟವನ್ನು ಎದುರಿಸುತ್ತಾನೆ.

ಒಬ್ಬ ಪರೀಕ್ಷಕನ ದೃಷ್ಟಿಕೋನದಿಂದ ಈ ಅಂಶಗಳನ್ನು ವಿವರಿಸುವುದು ಉಪಯುಕ್ತವಾದೀತು. ಕಳೆದ ಸೆಪ್ಟೆಂಬರ್‌ನಲ್ಲಿ ಇನ್‌ಸ್ಟಿಟ್ಯೂಟಿನ 'ಹಣ ಸಿದ್ಧಾಂತ ಮತ್ತು ಆಚರಣೆ' (ಮಾನಿಟರಿ ಥಿಯರಿ ಅಂಡ್ ಪ್ರ್ಯಾಕ್ಟೀಸ್) ಪರೀಕ್ಷೆಯಲ್ಲಿ ಅನೇಕ ವಿದ್ಯಾರ್ಥಿಗಳು ಖಜಾನೆ ಹುಂಡಿ ದರದಿಂದ ಕನಿಷ್ಠ ಸಾಲನೀಡಿಕೆ (ಮಿನಿಮಮ್ ಲೆಂಡಿಂಗ್ ರೇಟ್) ದರವನ್ನು ನಿಷ್ಪತ್ತಿ ಮಾಡಲು ಸೂತ್ರವೊಂದನ್ನು ದೀರ್ಘವಾಗಿ ವಿವರಿಸಿದರು. ಇದು ಹಳತಾಗಿದ್ದುದು ಮಾತ್ರವಲ್ಲದೆ ಹಾಗೆ ನೀಡಲಾಗಿದ್ದ ಪ್ರಶ್ನೆಗೆ ಸ್ವಲ್ಪಮಾತ್ರವೆ ಸಂಬಂಧಿಸಿದ್ದಾಗಿತ್ತು. ಅಲ್ಲದೆ ತೀರುವೆ ಬ್ಯಾಂಕುಗಳ ಶೇ. 8 ನಗದು ಅನುಪಾತ, ಶೇ. 28 ದ್ರವತ್ವ ಅನುಪಾತ ಇವಕ್ಕೆ 1960ರ ದಶಕದಲ್ಲಿ ಎಷ್ಟೊಂದು ಪ್ರಾಮುಖ್ಯವನ್ನು ನೀಡಲಾಗಿತ್ತೆಂದರೆ, ಮೀಸಲು ಆಸ್ತಿ ಅನುಪಾತದ (ರಿಸರ್ವ್ ಅಸೆಟ್ಸ್ ರೇಷಿಯೊ) ಕಡೆಗೆ ಆದ ಬದಲಾವಣೆಯನ್ನು ಅನೇಕ ವಿದ್ಯಾರ್ಥಿಗಳು ಒಪ್ಪಿಕೊಳ್ಳಲು ಹಲವು ವರ್ಷಗಳೇ ಬೇಕಾದವು ಮತ್ತು ಈಗಲೂ ಅದು ಕೆಲವರ ಅರಿವಿಗೆ ಬಂದಿಲ್ಲ.

ಒಂದು ರೀತಿಯಲ್ಲಿ ಇದು ಅಭ್ಯರ್ಥಿಗಳ ಅರಿವಿನ ಅಭಾವದ ಮತ್ತು ವಿಷಯವನ್ನು ಕುರಿತ ಸಾಹಿತ್ಯದ ಲೇಖಕರನ್ನು ಘಟನೆಗಳು ಯಾವಾಗಲೂ ಹಿಂದಕ್ಕೆ ಹಾಕುವ ಅಂಶದ ಪರಿಣಾಮವಿದು ಎನ್ನುವುದೇ ಸರಿ. ಅಧ್ಯಾಪಕರು ಕಾಲಬಾಹ್ಯರಾಗುವ ಸಂಭವವಿಲ್ಲ. ಆದಾಗ್ಯೂ ಕನಿಷ್ಠ ಸಾಲ ನೀಡಿಕೆ ದರ ಸ್ಥಾಪನೆ ವ್ಯವಸ್ಥೆಯಲ್ಲಿನ ಬದಲಾವಣೆಗಳು 1978ರ ಸೆಪ್ಟೆಂಬರ್ ಪರೀಕ್ಷೆಗೆ ಮುನ್ನ ತಮ್ಮ ವಿದ್ಯಾರ್ಥಿಗಳಿಗೆ ಈ ವಿಷಯಗಳನ್ನು ತಿಳಿಸುವುದು ಸಾಧ್ಯವಾಗುವಷ್ಟು ತಡವಾಗಿ ಬಂದವು. 1971ರ ಶರತ್ಕಾಲದಲ್ಲಿ ಅನುಷ್ಠಾನಗೊಳಿಸಿದ ಮೀಸಲು ಆಸ್ತಿಯ ಅನುಪಾತ 12% ಎಂಬ ವಿಷಯಕ್ಕೆ ಅಧ್ಯಾಪಕರು ಹೆಚ್ಚು ಪ್ರಾಮುಖ್ಯ ಕೊಟ್ಟರೆ. ವಿದ್ಯಾರ್ಥಿಗಳಾದವರು ಆ ಕ್ಷೇತ್ರದಲ್ಲಿ ಮಾಡಬಹುದಾದ ಯಾವುದೇ ಮುಂದಿನ ಬದಲಾವಣೆಯನ್ನು ಜೀರ್ಣಿಸಿಕೊಳ್ಳುವುದು ವಿದ್ಯಾರ್ಥಿಗಳಿಗೆ ಮತ್ತು ಸ್ವಲ್ಪಮಟ್ಟಿಗೆ ವಿಶ್ವದಲ್ಲಿ ವಾಸ್ತವವಾಗಿ ಏನು ನಡೆಯುತ್ತಿದೆ ಎಂಬುದನ್ನು ಕುರಿತ ವಿದ್ಯಾರ್ಥಿಯ ತಿಳಿವಳಿಕೆಗಾಗಿ ವಿಷಯದ ವಿಕಾಸವನ್ನು ಹೊಂದಿಸಿ ವಿದ್ಯಾರ್ಥಿಯ ಕುತೂಹಲವನ್ನು ಕಾಯ್ದುಕೊಳ್ಳುವುದು ಉದ್ದೇಶವಾಗಬೇಕು. ವಿಷಯದ ನಿರ್ವಹಣೆಯಲ್ಲಿ ಆಗಿಂದಾಗ ಕಂಡುಬರುವ ಸಂಬಂಧಗಳನ್ನು ವಿವರಿಸಲು ಮಾತ್ರ ಶುದ್ಧ ಸಿದ್ಧಾಂತಗಳನ್ನು ಬಳಸಬೇಕು.

ಸಂಯುಕ್ತರಾಜ್ಯಕ್ಕೆ (ಯುನೈಟೆಡ್ ಕಿಂಗ್‌ಡಮ್) ಸಂಬಂಧಿಸಿದಂತೆ ಆದರ್ಶ ಆರ್ಥಿಕ ಪರಿಸ್ಥಿತಿಯ ಚರ್ಚೆಯೊಂದಿಗೆ ಅಂದರೆ ಆರ್ಥಿಕ ನೀತಿಯ ಗುರಿಗಳ ಚರ್ಚೆಯೊಂದಿಗೆ ಇದನ್ನು ಆರಂಭಿಸುವುದು ಅತ್ಯಂತ ಉಚಿತವೆನಿಸುತ್ತದೆ. ಯಾವುದನ್ನು ಮೂಲಭೂತ ಪರಿಗಣನೆಗಳೆಂದು ಭಾವಿಸಬಹುದು ಮತ್ತು ಮಧ್ಯಂತರ ದ್ವಿತೀಯಕ ಅಂಶಗಳು ಯಾವುವು ಎಂಬುದರ ನಡುವಣ ವ್ಯತ್ಯಾಸವನ್ನು ಎತ್ತಿ ತೋರಿಸುತ್ತದೆ. ವಿವಿಧ ಗುರಿಗಳ ನಡುವೆ ಮಾತ್ರವಲ್ಲದೆ ಆರ್ಥಿಕ ಹಾಗೂ ಇತರೆ ಉದಾಹರಣೆಗೆ ಸಾಮಾಜಿಕ ಅಥವಾ ರಾಜಕೀಯ ಸ್ವರೂಪದ ಗುರಿಗಳ ನಡುವಣ ಸಾಮಂಜಸ್ಯದ ಪರಿಶೀಲನೆಯತ್ತ ಕರೆದೊಯ್ಯುತ್ತದೆ. ಗುರಿಗಳ ಅಸಾಮಂಜಸ್ಯ ಒತ್ತಿಹೇಳಬೇಕಾದ ಅಂಶವೆಂದು ತೋರುತ್ತದೆ. ಅರ್ಥಶಾಸ್ತ್ರಜ್ಞನೊಬ್ಬ ಹೇಳಿದಂತೆ ಕೆಲವು ಆರ್ಥಿಕ ಸಮಸ್ಯೆಗಳಿಗೆ ಪರಿಹಾರಗಳಿವೆ. ಆದರೆ ಬಹುತೇಕ ಪರಿಹಾರಗಳು ಸಮಸ್ಯೆಗಳನ್ನು ಸೃಷ್ಟಿಸುತ್ತವೆ.

ಮೂಲ ಅಂಶಗಳನ್ನು ಪ್ರತ್ಯೇಕಿಸಿ ಯಥೋಚಿತ ಸಿದ್ಧಾಂತಗಳನ್ನು ಮತ್ತು ಸಂಬಂಧಗಳನ್ನು ಸಾಧ್ಯವಾದಷ್ಟು ಸಹಜವಾಗಿ ತಂದು ಇವನ್ನು ಅನುಕ್ರಮವಾಗಿ ಚರ್ಚಿಸಬಹುದು. ಬ್ಯಾಂಕರರಿಗೆ ಹಣವ್ಯವಸ್ಥೆ ಹಾಗೂ ಸಾರ್ವಜನಿಕ ಹಣಕಾಸು ಇವುಗಳ ಕಾರ್ಯಸ್ವರೂಪವನ್ನು ಬೋಧಿಸುವುದು ಅಗತ್ಯ. ಅರ್ಥವ್ಯವಸ್ಥೆಯ ಮೇಲೆ ಪ್ರಭಾವ ಬೀರಲು ಅಥವಾ ಅದನ್ನು ನಿಯಂತ್ರಿಸಲು ಪ್ರಾಧಿಕಾರಿಗಳು ತೆಗೆದುಕೊಳ್ಳಬಹುದಾದ ಕ್ರಮಗಳ ಒಂದು ರೂಪರೇಷೆಯೊಂದಿಗೆ ಪಠ್ಯಕ್ರಮ ಕೊನೆಗೊಳ್ಳಬಹುದು.

### ಉಪಸಂಹಾರ

ಈ ಸಂಪ್ರಬಂಧದ ಮುಖ್ಯ ತೀರ್ಪೆಂದರೆ ಅರ್ಥಶಾಸ್ತ್ರದ ಬಗ್ಗೆ ತಿಳಿಯಬೇಕಾದ್ದು ಬ್ಯಾಂಕರನಿಗೆ ಅತ್ಯಾವಶ್ಯಕವಾಗಿದೆ. ಆದರೆ ಯಾವ ರೀತಿಯ ಅರ್ಥಶಾಸ್ತ್ರವನ್ನು ಬೋಧಿಸಬೇಕೆಂಬುದು, 'ಎ' ಮಟ್ಟದ ಪರೀಕ್ಷೆಗೆ ಕಲಿಯುವುದಕ್ಕಿಂತ ಸ್ವಲ್ಪ ಭಿನ್ನವಾಗಿರುತ್ತದೆ. ಶಾಲೆ, ಕಾಲೇಜು, ತಂತ್ರವಿದ್ಯಾ ಸಂಸ್ಥೆ ಅಥವಾ ವಿಶ್ವವಿದ್ಯಾನಿಲಯದ ಔಪಚಾರಿಕ ತರಬೇತಿ ಮತ್ತು ಪಠ್ಯಪುಸ್ತಕದ ಓದು ಅವನ ಅಗತ್ಯದ ಸ್ವಲ್ಪ ಭಾಗವನ್ನು ಮಾತ್ರ ತುಂಬುತ್ತದೆ. ಅಂದಂದಿನ ವ್ಯವಹಾರ ಸನ್ನಿವೇಶಗಳಿಗೆ ತೃಪ್ತಿಕರವಾಗಿ ಅವನು ಪ್ರತಿಕ್ರಿಯಿಸಬೇಕಾದರೆ ತನ್ನ ಜ್ಞಾನವನ್ನು ಯುಕ್ತವಾಗಿರುವಂತೆ ಅನ್ವಯಿಸಲು ಸಮರ್ಥನಾಗಿರಬೇಕು. ಆರ್ಥಿಕ ಪರಿಸರದಲ್ಲಿ ಅಂದಂದಿನ ವರೆಗೆ ಸಂಬಂಧಿಸಿರುವ ನಿರಂತರವಾದ ಮತ್ತು

ಮುಂದುವರಿಯುತ್ತಿರುವ ಬದಲಾವಣೆಗಳ ಅರಿವು ಇರಬೇಕು. ಇದನ್ನು ಅವನು ತನಗಾಗಿಯೇ ಮಾಡಿಕೊಳ್ಳಬೇಕಾಗುತ್ತದೆ. ಔಪಚಾರಿಕ ಶಿಕ್ಷಣದ ಅವಧಿ ಮುಗಿದಾಗ ವಿಷಯದಲ್ಲಿ ಉತ್ಸಾಹಪೂರಿತ ಆಸಕ್ತಿ ಪಡೆಯುವುದನ್ನು ಮುಂದುವರಿಸಿಕೊಂಡು ಹೋಗುವಂತೆ ವಿದ್ಯಾರ್ಥಿಯ ಭಾವನೆಯನ್ನು ಕೆರಳಿಸಬೇಕು ಎಂಬುದು ಅರ್ಥಶಾಸ್ತ್ರ ಶಿಕ್ಷಣದ ಉದ್ದೇಶಗಳ.

# ನಿಯೋಜನೆ ಎಂದರೇನು ?*

ಮೂಲ : **ಮೈಕೇಲ್ ಪಿಚರ್**

ಅನುವಾದ : **ಜನಾರ್ದನ ತುಂಗ, ಪು. ರಾ. ಮುರಳೀಧರ**

ಈ ದಿನಗಳಲ್ಲಿ ಅತಿಯಾಗಿ ಬಳಸಲಾಗುತ್ತಿರುವ ವ್ಯವಸ್ಥಾಪನ ವಿಷಯದ ಪಾರಿಭಾಷಿಕ ಆಡಂಬರದ ಶಬ್ದಗಳಲ್ಲೆಲ್ಲಾ ಪ್ರಾಯಶಃ "ನಿಯೋಜನೆ" ಎನ್ನುವ ಶಬ್ದ ಮೇಲಿಂದ ಮೇಲೆ ಕೇಳಿಬರುವಂತಹುದು. ಆದರೆ ನಮ್ಮಲ್ಲೆಷ್ಟು ಜನ ಕೆಳಗಣ ವಿಷಯಗಳನ್ನು ಚಿಂತಿಸಲು ತುಸು ವೇಳೆಯನ್ನಾದರೂ ತೊಡಗಿಸುತ್ತಾರೆ ?

—ವಾಸ್ತವವಾಗಿ ಈ ಪದದ ಅರ್ಥವೇನು ?

ನಾವು ಹಾಗೂ ನಮ್ಮ ಸಹೋದ್ಯೋಗಿಗಳು ಹೆಚ್ಚು ಪರಿಣಾಮಕಾರಿ ವ್ಯವಸ್ಥಾಪಕರಾಗಲು ನಿಯೋಜನೆ ಹೇಗೆ ಸಹಾಯ ಮಾಡಬಲ್ಲದೆಂದು ಉದ್ದೇಶಿಸಲಾಗಿದೆ ?

—ನಾವು ಉತ್ತಮ ನಿಯೋಜಕರೇ, ಅಲ್ಲವೆ ?

ಕೇವಲ ಜಡಜೀವನವೊಂದನ್ನು ನಡೆಸಲು ಅವಕಾಶ ನೀಡುವುದಾಗಲಿ, ನಮ್ಮ ವ್ಯವಸ್ಥಾಪನ ಜವಾಬ್ದಾರಿಗಳಿಂದ ತಪ್ಪಿಸಿಕೊಳ್ಳುವ ದಾರಿಯೊಂದನ್ನು ಒದಗಿಸುವುದಾಗಲಿ ನಿಯೋಜನೆಯ ಉದ್ದೇಶವಲ್ಲ. ನಮ್ಮ ಮೇಜುಗಳಿಂದ ನಾವು ಏನೇನೂ ಇಷ್ಟಪಡದ ಎಲ್ಲ ಕೆಲಸಗಳನ್ನು ದೂರವಿಡುವುದು ಕೂಡ ಇದರ ಉದ್ದೇಶವಲ್ಲ.

ಬದಲಾಗಿ ಜವಾಬ್ದಾರಿಯ ವಲಯದೊಳಗೆ ಬರುವ ಅತಿ ಪ್ರಮುಖ ಕಾರ್ಯಭಾರದ ಕಡೆಗೆ ಗಮನವನ್ನು ಕೇಂದ್ರೀಕರಿಸಲು ನಮಗೆ ಸಮಯವನ್ನು ನೀಡುವುದು ಇದರ ಉದ್ದೇಶವಾಗಿರುತ್ತವೆ, ಮತ್ತು ನಮ್ಮ ಕಿರಿಯ ಸಹೋದ್ಯೋಗಿಗಳು ನೀಡಬಲ್ಲ ಮೌಲಿಕ ಸಂಪನ್ಮೂಲಗಳನ್ನು ನಮ್ಮ ಉತ್ತಮ ಅನುಕೂಲಗಳಿಗಾಗಿ ಬಳಸುವುದನ್ನು ಖಾತರಿಪಡಿಸಿಕೊಳ್ಳುವುದು ಇದರ ಒಂದು ಉದ್ದೇಶ.

ನನ್ನ ನಿಘಂಟಿನಲ್ಲಿ ಈ ಶಬ್ದದ ಅರ್ಥದ ಬಗೆಗೆ ಸಂದೇಹವಿಲ್ಲ ಎಂಬಷ್ಟು ಅಲ್ಪವಾದ, "ವಹಿಸಿಕೊಡು, ಬದ್ಧಗೊಳಿಸು" ಎಂಬ ವ್ಯಾಖ್ಯೆಯನ್ನು ಇದು ನೀಡುತ್ತದೆ. ಹಂಗಾಮಿ ಸುಪರ್ದು ಅಥವಾ ಒಡೆತನವನ್ನು ಬೇರೊಬ್ಬರಿಗೆ ವಹಿಸಲಾಗಿದೆ ಎಂಬುದನ್ನು ಇದು ಸ್ಪಷ್ಟವಾಗಿ ಸೂಚಿಸುತ್ತದೆ. ನಿಯೋಜನೆಯನ್ನು ಕುರಿತು ನಮ್ಮಲ್ಲೆಷ್ಟು ಜನ ಈ ರೀತಿ ಯೋಚಿಸಿದ್ದೇವೆ ?

## ಮೂಲ ನಿಯಮಗಳು

ಇಲ್ಲಿ ನಾಲ್ಕು ಮುಖ್ಯ ಮೂಲ ನಿಯಮಗಳಿವೆ.

(ಅ) ನಿಯೋಜಿಸುತ್ತಿರುವ ಕಲಾಪದಿಂದ ನೀವು ಏನನ್ನು ಸಾಧಿಸಲು ಆಶಿಸುತ್ತೀರಿ ಎಂಬುದರ ಬಗೆಗೆ ಸ್ಪಷ್ಟವಾಗಿ ಯೋಚಿಸಿರಿ : ಮತ್ತು ನಿಮ್ಮ ಕೈಕೆಳಗಿನವರು ಆ ಗುರಿಗಳನ್ನು ಅರ್ಥಮಾಡಿಕೊಳ್ಳುತ್ತಾರೆ ಮತ್ತು ಒಪ್ಪಿಕೊಳ್ಳುತ್ತಾರೆ ಎಂಬುದನ್ನು ಖಚಿತಪಡಿಸಿಕೊಳ್ಳಿ.

ನಮ್ಮ ಹೆಚ್ಚಿನ ಕಿರಿಯ ಸಹೋದ್ಯೋಗಿಗಳಿಗೆ ಗುರಿಗಳನ್ನು ಹಾಕಿಕೊಡುವುದರಲ್ಲಿ ನಮ್ಮಲ್ಲನೇಕ ಜನರು ತುಂಬಾ ಅಸಮರ್ಥರಾಗಿರುವುದರಿಂದ, ಈ ಚೈತನ್ಯಶೀಲ ಮೊದಲ ಹೆಜ್ಜೆ ಆಗಾಗ ಕಾಣದಿರುವುದು ನನ್ನ ಅನುಭವ. ಆದರೆ ಸ್ಪಷ್ಟ ಗುರಿಗಳು ಇದ್ದಲ್ಲಿ ಮಾತ್ರ ನಾವು ಅವರ ಸಾಧನೆಗಳನ್ನು ಅಳೆಯುವುದು ಸಾಧ್ಯ.

(ಆ) ಅವಶ್ಯವಿದ್ದರೆ, ಸಮಸ್ಯೆಗಳನ್ನು ಹೇಗೆ ಎದುರಿಸಬೇಕೆಂಬುದನ್ನು ಯೋಚಿಸಲು ಅವರಿಗೆ ನೆರವಾಗಿ. ಕೈಕೆಳಗಿನವರು ಅನನುಭವಿಗಳಾಗಿದ್ದ ಹೊರತು ಅಥವಾ ವಹಿಸಿದ ಕೆಲಸ ತುಂಬಾ ಕಷ್ಟವಾದದ್ದಾಗಿರದ ಹೊರತು ಈ ಹಂತದ ಹೆಚ್ಚಿನ ಅಥವಾ ಎಲ್ಲ ಅಂಶಗಳನ್ನು ಅವರ ಉಪಕ್ರಮಕ್ಕೆ ಬಿಡುವುದು ಒಳ್ಳೆಯದು.

(ಇ) ನೀವು ಪ್ರಗತಿಯನ್ನು ಗುರುತಿಸುವುದು ಮತ್ತು ಗುಣಮಟ್ಟವನ್ನು ಪರೀಕ್ಷಿಸುವುದು ಸಾಧ್ಯವಾಗುವಂತೆ ಒಂದು ಸರಳ ನಿಯಂತ್ರಣ ವ್ಯವಸ್ಥೆಯನ್ನು ಸ್ಥಾಪಿಸಿ. ಈ ವ್ಯವಸ್ಥೆ ಶಕ್ತಿಯುತವಾದ್ದು, ಆದರೆ ಗಮನ ಸೆಳೆಯದ್ದೂ, ನಿಯತವಾದ್ದು, ಆದರೆ ಸಾಧ್ಯವಾದಷ್ಟು ವಿರಳವಾದುದೂ

* What is Delegation?, Michael Pitcher, FIB,DIP,TS, *Journal of the Institute of Bankers* (London)

ಆಗಿರಬೇಕು. ಇದನ್ನು ಒಂದು ಬೆದರಿಕೆ ಎನ್ನುವುದಕ್ಕಿಂತ ಉತ್ತೇಜಕ, ಬೆಂಬಲ ಎಂಬುದಾಗಿ ಕಾಣಬೇಕು.

(ಈ) ಕೊನೆಯದಾಗಿ, ಒಂದು ಪೂರ್ವನಿಶ್ಚಿತ ಅವಧಿಯಲ್ಲಿ ನಿರ್ಧರಿಸಲಾದ ಗುರಿಗಳ ಹಿನ್ನೆಲೆಯಲ್ಲಿ ನಿಮ್ಮ ಕೈಕೆಳಗಿನವರ ನಿರ್ವಹಣೆಯನ್ನು ಮೌಲೀಕರಿಸಿ. ಯಶಸ್ಸನ್ನು ಶ್ಲಾಘಿಸಲೂ, ಸೋಲನ್ನು ಎತ್ತಿ ತೋರಿಸಲೂ ಇದು ಒಂದು ಅವಕಾಶ ಕೂಡ.

### ಮಾಡಬೇಕಾದ್ದು

ಎಷ್ಟು ಕೆಳಮಟ್ಟಕ್ಕೆ ಸಾಧ್ಯವೊ ಅಷ್ಟು ಕೆಳಮಟ್ಟಕ್ಕೆ ನಿಯೋಜಿಸಿ (ಡೆಲಿಗೇಟ್). ಇದು ಭವಿಷ್ಯಕ್ಕೊಂದು ಅದ್ಭುತ ವಿನಿಯೋಜನೆ ಮತ್ತು ನಿಮ್ಮ ಜನರ ಸಾಮರ್ಥ್ಯ ನಿಮ್ಮನ್ನು ಆಗಾಗ ಬೆರಗುಗೊಳಿಸುತ್ತದೆ.

ನೀವು ಕೆಲವು ತಪ್ಪುಗಳನ್ನು ನಿರೀಕ್ಷಿಸಬಹುದು. ಇವು ಮಾನವ ಜನಾಂಗ ಈ ವರೆಗೆ ರೂಪಿಸಿದ ಅತ್ಯುತ್ತಮ ತರಬೇತಿಯನ್ನು ಪ್ರತಿನಿಧಿಸುತ್ತವೆ. ನಿಮ್ಮ ನಿಯಂತ್ರಣದ ರಚನೆ, ವಿನ್ಯಾಸಗಳನ್ನು ಎಂತಿರಬೇಕೆಂಬುದನ್ನು ಖಚಿತಪಡಿಸಿಕೊಳ್ಳಬೇಕು.

ಮುಖ್ಯ ಕೆಲವು ಕಾರ್ಯಗಳನ್ನು ನಿಯೋಜಿಸಿ. ನಿಮ್ಮ ಕೈಕೆಳಗಿನವರ ಅರಿವಿನ ಅಳವಿಗೆ ನಿಲುಕುವಂಥದ್ದನ್ನು ಆರಿಸಿ ಮತ್ತು ಇಂಥಲ್ಲಿ ಯಶಸ್ಸೆಂಬುದು ಅವರಿಗೆ ಮಹತ್ವದ ವಿಷಯವಾಗುತ್ತದೆ.

ನಿಮ್ಮ ಮೇಜಿಗೆ ಬರುವ ಅತ್ಯಂತ ಸರಳವಾದ ಮತ್ತು ತುರ್ತು ಕೆಲಸವನ್ನು ನೀವೇ ನಿರ್ವಹಿಸಿ.

ನೀವು ನಿಮ್ಮ ಕೈಕೆಳಗಿನವರಿಗೆ ನೀಡಿರುವ ಜವಾಬ್ದಾರಿಗಳನ್ನು ಈಡೇರಿಸಲು ಅಗತ್ಯವಾದ ಯಾವುದೇ ಪ್ರಾಧಿಕಾರವನ್ನು ನಿಯೋಜಿಸಿ.

### ಮಾಡಬಾರದ್ದು

ಕಳಪೆಯಾದುದನ್ನು ನಿಯೋಜಿಸಬೇಡಿ. ಇದು ನಿಮ್ಮ ಜನರಲ್ಲಿಯ ಅತ್ಯುತ್ತಮವಾದುದನ್ನು ಪಡೆಯುವಂತೆ ಮಾಡುವುದಿಲ್ಲ. ಇಲ್ಲವೇ ಅವರು ಬೆಳೆಯಲು ನೆರವಾಗುವುದಿಲ್ಲ.

ಪ್ರತಿ ಸಾರಿಯೂ ಪರಿಪೂರ್ಣತೆಯನ್ನೇ ನಿರೀಕ್ಷಿಸಬೇಡಿ. ಅದು ಅಪರೂಪವಾಗಿ ಸಾಧಿಸುವಂಥಾದ್ದಾಗಿದೆ.

ಹೊಸ ವಿಚಾರಗಳಿಗೆ ತಣ್ಣೀರೆರಚಬೇಡಿ. ದೊಡ್ಡ ಬ್ಯಾಂಕಿಂಗ್ ಸಂಸ್ಥೆಯಲ್ಲಿ ನವೋನ್ಮೇಷಣ ಎಂಥ ಸಂಧಿಕಾಲದಲ್ಲೂ (ಬೆಸ್ಟ್ ಆಫ್ ಟೈಮ್ಸ್) ಅತಿಕಷ್ಟಕರವಾಗಿರುತ್ತದೆ ಮತ್ತು ಬದಲಾವಣೆಯ ಸಲುವಾಗಿ ಬಂದ ಅನೇಕ ಸಲಹೆಗಳನ್ನು ಮೊದಲು ಕೇಳಿದಾಗ ನಮಗೆ ಆಕರ್ಷಕವಾಗಿರುವುದಿಲ್ಲ. ಏಕೆ ?—ಎನ್ನುವುದಕ್ಕಿಂತ ಏಕಾಗಬಾರದು ? ಎಂದು ಕೇಳಲು ಪ್ರಯತ್ನಿಸಿ—

### ನೆನಪಿನಲ್ಲಿಡಿ

ಕೆಲವು ನಿರ್ಧಾರಗಳು ಸ್ಪಷ್ಟವಾಗಿ ನಿಮ್ಮದಾಗಿರುತ್ತವೆ ಮತ್ತು ನಿಮ್ಮವು ಮಾತ್ರವೇ ಆಗಿರುತ್ತವೆ. ಇವನ್ನು ನಿಯೋಜಿಸಲಾಗುವುದಿಲ್ಲ.

ನಮ್ಮ ಪ್ರಾಮುಖ್ಯದ ಬಗ್ಗೆ ನಮ್ಮಲ್ಲನೇಕರು ಮಿತಿಮೀರಿ ಬೆಲೆ ಕಟ್ಟುತ್ತಾರೆ. ನಾವು ಅತಿ ಪ್ರೀತಿಯಿಂದ ಕಲ್ಪಿಸಿಕೊಳ್ಳುವಂತೆ ನಾವು ಸಾಮಾನ್ಯವಾಗಿ ಅನಿವಾರ್ಯವಾಗಿರುವುದಿಲ್ಲ.

### ಒಂದು ಘಟನೆಯ ಅಧ್ಯಯನ

ಅಸಮರ್ಪಕ ನಿಯೋಜನೆ :

ಒಬ್ಬ ಶಾಖಾ ವ್ಯವಸ್ಥಾಪಕ ಹೊಸದಾಗಿ ನೇಮಕಗೊಂಡ ಕಛೇರಿ ವ್ಯವಸ್ಥಾಪಕನನ್ನು ಕರೆಯುತ್ತಾನೆ ಮತ್ತು ಅವನ ಸ್ವಾಗತ ನುಡಿಯನ್ನು ಈ ರೀತಿ ಪ್ರಾರಂಭಿಸುತ್ತಾನೆ :

ಸ್ಮಿತ್, ನಮ್ಮ ಮುಂಗಟ್ಟೆ (ಕೌಂಟರ್) ಸೇವೆ ಅತ್ಯಂತ ಅಸಹ್ಯವಾಗಿದೆ. ಈ ಬಗ್ಗೆ ಏನು ಮಾಡಬೇಕೆಂದು ನನಗೆ ತಿಳಿಯುವುದಿಲ್ಲ, ಆದರೆ ಇದನ್ನು ಸರಿಪಡಿಸಲೇಬೇಕು.

ಈ ಸಮಸ್ಯೆ ತಾನು ಎದುರಿಸಬೇಕಾದ್ದು ಎಂಬ ಒಂದು ಅಸ್ಪಷ್ಟ ಮನಶ್ಚಿತ್ರದೊಡನೆ ಶ್ರೀ ಸ್ಮಿತ್ ಕಛೇರಿಯಿಂದ ಹೊರಡುತ್ತಾ, ಕಛೇರಿಯ ಕಾರ್ಯವಿಧಾನವನ್ನು ತಾನು ತಿಳಿದ ಮೇಲೆ, ಕೆಲವು ವಾರ ತರುವಾಯ ಕಛೇರಿಯ ವಿಷಯಗಳನ್ನು ಉತ್ತಮಪಡಿಸಲು ತೀರ್ಮಾನಿಸುತ್ತಾನೆ.

ಮುಂದಿನ ತಿಂಗಳುಗಳಲ್ಲಿ ವಾರದ ಅನೇಕ ದಿನಗಳಲ್ಲಿ ಊಟದ ಸಮಯದ ಬೇರೆಬೇರೆ ಅವಧಿಗಳಲ್ಲಿ ಶಾಖಾ ವ್ಯವಸ್ಥಾಪಕ ತನ್ನ ಕಛೇರಿಯಿಂದ ಹೊರಗೆ ಬಂದಾಗ, ಉದ್ದುದ್ದವಾದ ಸಾಲುಗಳನ್ನೂ, ಪ್ರತ್ಯಕ್ಷವಾಗಿ ಅತೃಪ್ತರಾಗಿರುವ ಗ್ರಾಹಕರನ್ನೂ ಕಂಡ. ಅವನ ಮೈ ಬಹುಬೇಗ ಕಾವೇರಿತು. ಮತ್ತು ಆತ ಶ್ರೀ ಸ್ಮಿತ್‌ನ ಕಡೆಗೆ ಬಿರುನೋಟವನ್ನು ಬೀರುವಷ್ಟು ಹೊತ್ತು ನಿಂತ, ಅನೇಕ ಸರತಿ ನಗದಿಗಾರರಿಗೆ (ರಿಲೀಫ್ ಕ್ಯಾಶಿಯರ್ಸ್) ಗಲ್ಲಾಗಳನ್ನು ನೋಡಿಕೊಳ್ಳುವಂತೆ ಆದೇಶ ನೀಡಿ, ಮುಂಗಟ್ಟೆಯ ವಹಿವಾಟುಗಳನ್ನು ತಾನೇ ನಿರ್ವಹಿಸಲು ಪ್ರಾರಂಭಿಸಿದ.

ಶಾಖಾ ವ್ಯವಸ್ಥಾಪಕ ಅತ್ಯಂತ ವಿಮರ್ಶಾತ್ಮಕವಾದ ವರದಿ ಬರೆಯುವ, ಸಿಬ್ಬಂದಿಯ ಬಗ್ಗೆ ಬೆಲೆ ಕಟ್ಟುವ ಮುಂದಿನ ವಾಯಿದಾ ದಿನದ ವರೆಗೆ ಶ್ರೀ ಸ್ಮಿತ್‌ನಿಗೆ ಏನನ್ನೂ ಹೇಳಲಿಲ್ಲ.

ಸಮರ್ಪಕ ನಿಯೋಜನೆ :

ಅಂತಹದೇ ಒಂದು ಸ್ವಾಗತ ಸಭೆಯಲ್ಲಿ ಶಾಖಾ ವ್ಯವಸ್ಥಾಪಕ ಹೀಗೆ ಹೇಳುತ್ತಾನೆ :

ನೋಡಿ ಜಾನ್, ನಮ್ಮ ಮುಂಗಟ್ಟೆಗಳ ಸೇವೆ ಇನ್ನೂ ಬಹಳ ಉತ್ತಮವಾಗಬಹುದಿತ್ತು. ನಮಗೆ ತುಂಬಾ ದೂರುಗಳು ಬರುತ್ತಿವೆ. ನಮ್ಮ ಸಿಬ್ಬಂದಿಯೂ ತಾವು ನೀಡುವ

ಸೇವೆಯ ಬಗೆಗೆ ಅಸಂತೋಷಗೊಂಡಿದ್ದಾರೆ ಮತ್ತು ಶಾಖೆ ತನ್ನ ಗ್ರಾಹಕರನ್ನು ಕಳೆದುಕೊಳ್ಳುವುದು ಆರಂಭವಾಗಿರಬಹುದೇನೋ ಎಂಬುದು ನನ್ನ ಅಂಜಿಕೆ.

ನನ್ನ ಹತ್ತಿರ, ನನ್ನವೇ ಆದ ಕೆಲವು ವಿಚಾರಗಳಿವೆ. ಆದರೆ ಮುಂದಿನ ವಾರಗಳಲ್ಲಿ ಈ ಸಮಸ್ಯೆಯನ್ನು ಕುರಿತು ನೀವು ಯೋಚಿಸಬೇಕೆಂದು ನಾನು ಇಚ್ಛಿಸುತ್ತೇನೆ. ಆನಂತರ ನಾವು ಮತ್ತೊಮ್ಮೆ ಮಾತನಾಡೋಣ ಮತ್ತು ಈ ಪರಿಸ್ಥಿತಿಯನ್ನು ಹೇಗೆ ಸುಧಾರಿಸಬಹುದೆಂಬುದನ್ನು ಚರ್ಚೆ ಮಾಡೋಣ. ಈ ಭೇಟಿಯಲ್ಲಿ ಪ್ರಗತಿಯನ್ನು ಅಳೆಯಲು ಸಾಧ್ಯವಾಗುವ ಪರಿಮಾಣ ಮಾಪಕ ಗುರಿಗಳ ಬಗೆಗೆ ಸ್ಪಷ್ಟವಾಗಿ ಒಪ್ಪಂದಕ್ಕೆ ಬರಬೇಕೆಂದು ನಾನು ಇಚ್ಛಿಸುತ್ತೇನೆ.

ನಾನು ನಿಮ್ಮ ಅಭಿಪ್ರಾಯಗಳನ್ನು ಮೆಚ್ಚಿಕೊಂಡರೆ, ಪರಿಸ್ಥಿತಿಯನ್ನು ಬದಲಾಯಿಸಲು ನಿಮಗೆ ನನ್ನಿಂದ ಸಂಪೂರ್ಣ ಅಧಿಕಾರ ದೊರಕುತ್ತದೆ ಮತ್ತು ಪರಿಸ್ಥಿತಿ ತುಂಬಾ ಕೆಟ್ಟದ್ದಾಗಿದೆ ಎಂದು ನನಗೆ ಅನಿಸದ ವಿನಾ ಮಧ್ಯ ಪ್ರವೇಶಿಸುವುದಿಲ್ಲ. ನಮ್ಮ ಲಕ್ಷ್ಯಗಳ ಹಿನ್ನೆಲೆಯಲ್ಲಿ ಪ್ರಗತಿಯನ್ನು ಪರೀಕ್ಷಿಸಲು ತಿಂಗಳಿಗೊಮ್ಮೆ ಮಾತುಕತೆ ಮಾಡೋಣ.

ಉತ್ತಮಗೊಳ್ಳುವುದಕ್ಕೆ ಮೊದಲು, ಪರಿಸ್ಥಿತಿ ಕೆಟ್ಟಾಗ್ಯೂ, ಶಾಖಾ ವ್ಯವಸ್ಥಾಪಕ ಮಧ್ಯ ಪ್ರವೇಶಿಸಲೇ ಇಲ್ಲ. ಒಬ್ಬ ವ್ಯವಸ್ಥಾಪಕನಂತೆ ತನ್ನನ್ನು ನಡೆಸಿಕೊಳ್ಳಲಾಯಿತೆಂದು ಜಾನ್ ಭಾವಿಸಿಕೊಂಡು ಮತ್ತು ಬೆಲೆ ಕಟ್ಟುವುದಕ್ಕೆ ಆಧಾರವಾಗಿ ಉತ್ತಮ ಸಾಧನೆಯ ಮಾನವೊಂದು ಶಾಖಾ ವ್ಯವಸ್ಥಾಪಕನಿಗೆ ದೊರೆಯಿತು.

---

ಲಂಡನ್ನಿನ ಬಳಿಯ ಚೆಮ್ಸ್‌ಫರ್ಡ್ ಎಂಬಲ್ಲಿನ ಆರು ಮಕ್ಕಳ ತಾಯಿಯೊರ್ವಳು ತನ್ನ ಬ್ಯಾಂಕಿನ ಮೇಲೆ ಬರೆದ ಚೆಕ್ಕೊಂದು ಅನಾದರಣೆಯಾಗಿ ಅವಳಿಗೆ ವಾಪಸ್ಸು ಬಂದಿತು. ಅನಾದರಣೆಗೆ ಬ್ಯಾಂಕಿನವರು ನೀಡಿದ ಕಾರಣ "ಚೆಕ್ಕಿನ ಮೊಬಲಗು ಸರಿಯಾಗಿ ಬರೆದಿಲ್ಲ." "ಎಂಟು ಪೌಂಡ್, ಆರು ಷಿಲ್ಲಿಂಗ್" ಎಂದು ಬರೆಯುವ ಬದಲು ಆಕೆ "ಎಂಟು ಪೌಂಡ್ ಆರು ಮಕ್ಕಳು" ಎಂದು ಬರೆದಿದ್ದಳು.

* * *

ನನ್ನ ಗೆಳೆಯನೊಬ್ಬ ತನ್ನ ಬ್ಯಾಂಕ್ ಪಾಸ್ ಪುಸ್ತಕವನ್ನು ಔಷಧಿ ಅಂಗಡಿಗೆ ತಂದಿದ್ದ. "ಇದರಲ್ಲಿ ಇರುವ ನಮೂನೆಗಳನ್ನು ವಿವರಿಸಿ ಹೇಳಿ" ಎಂದು.

* * *

ವಸ್ತುರೂಪೀ ಹಣ ಬಳಕೆಯಲ್ಲಿದ್ದ ಕಾಲ. ನಾಣ್ಯಗಳಿನ್ನೂ ಬಳಕೆಗೆ ಬಂದಿರಲಿಲ್ಲ. ಲೋಹದ ತಗಡುಗಳು ಹಣವಾಗಿ ಉಪಯೋಗದಲ್ಲಿದ್ದುವು. ಆಗ ಊರಿಂದೂರಿಗೆ ಪಯಣಿಸಿ ಸರಕುಗಳನ್ನು ಕೊಳ್ಳುತ್ತಿದ್ದ ವ್ಯಾಪಾರಿ. ತನ್ನೊಂದಿಗೆ ಲೋಹದ ತಗಡು, ತಕ್ಕಡಿ ಹಾಗೂ ಕತ್ತರಿಗಳನ್ನು ಒಯ್ಯುತ್ತಿದ್ದ. ವ್ಯಾಪಾರ ಮಾಡಿದ ಸ್ಥಳಗಳಲ್ಲಿ ಬಿಲ್ ಪಾವತಿಗಾಗಿ ಲೋಹದ ತಗಡನ್ನು ಕತ್ತರಿಯಿಂದ ಕತ್ತರಿಸಿ ತಕ್ಕಡಿಯಲ್ಲಿ ತೂಗಿ ಕೊಡುತ್ತಿದ್ದ.

—ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

# ಸಾರ್ವಜನಿಕ ಕಂಪನಿ ಠೇವಣಿಗಳು : ಒಂದು ಅಧ್ಯಯನ

**ಕೆ. ಎನ್. ಮಹಾಬಲ**

### ಪ್ರಸ್ತಾವನೆ

"ನಿಮ್ಮ ಠೇವಣಿ ನಮ್ಮಲ್ಲಿ ಸುರಕ್ಷಿತ : ನಿಮ್ಮ ಹಲವಾರು ಯೋಜನೆಗಳಿಗೆ ಸರಿಹೊಂದುವ ಠೇವಣಿ ಯೋಜನೆಗಳು ನಮ್ಮಲ್ಲಿವೆ. ಭವಿಷ್ಯವನ್ನು ಎದುರಿಸಿ. ನಿಮ್ಮ ಹೆಚ್ಚುವರಿ ಹಣವನ್ನು ನಮ್ಮಲ್ಲಿ ವಿನಿಯೋಜಿಸಿ" ಎಂಬ ತರಹದ ಜಾಹೀರಾತುಗಳು ವಾಣಿಜ್ಯ ಬ್ಯಾಂಕುಗಳದ್ದು ಎಂದು ಯಾರಾದರೂ ಹೇಳಿಬಿಡಬಹುದು. ಆದರೆ ಇದಕ್ಕೆ ಸರಿಸಮನಾದ ಅನೇಕ ಜಾಹೀರಾತುಗಳನ್ನೂ ನಾವು ನೋಡಬಹುದು.

"....ಕಂಪನಿಯು ಸಾರ್ವಜನಿಕ ಠೇವಣಿಗಳನ್ನು ಸ್ವೀಕರಿಸುತ್ತದೆ. ಒಂದು ವರ್ಷದ ಅವಧಿ ಠೇವಣಿಗೆ ಬಡ್ಡಿದರ ಶೇ. 11.5" ಎಂದೆಲ್ಲಾ ವಿವರಿಸುವ ಈ ಜಾಹೀರಾತುಗಳನ್ನು ಸಾರ್ವಜನಿಕ ಕಂಪನಿಗಳು ನೀಡುತ್ತವೆ. ಹಾಗಾದರೆ ಇವು ಸುಸ್ಥಾಪಿತವಾದ ವಾಣಿಜ್ಯ ಬ್ಯಾಂಕುಗಳಿಗೆ ಒಂದು ಸವಾಲೆ ? ಕಂಪನಿಯ ಠೇವಣಿಗಳು ವಾಣಿಜ್ಯ ಬ್ಯಾಂಕುಗಳೊಂದಿಗೆ ಗುಣಾತ್ಮಕವಾಗಿ ಪೈಪೋಟಿ ನಡೆಸುತ್ತಿವೆಯೆ ? ಸಾರ್ವಜನಿಕರಿಂದ ಕಂಪನಿಗಳು ನೇರವಾಗಿ ಏಕೆ ಠೇವಣಿಗಳನ್ನು ಸ್ವೀಕರಿಸುತ್ತವೆ ? ಸಂಪನ್ಮೂಲದ ಕೊರತೆ ಅವುಗಳನ್ನು ಬಾಧಿಸುತ್ತಿದೆಯೆ ? ಇಂತಹ ಹಲವಾರು ಸಂಶಯಗಳಿಗೆ ಈ ಪ್ರವೃತ್ತಿ ಒಮ್ಮೆಲೇ ದಾರಿಮಾಡಿಕೊಡಬಹುದು. ಇಂಥದೊಂದು ಸನ್ನಿವೇಶದಲ್ಲಿ ಸಾರ್ವಜನಿಕ ಠೇವಣಿಗಳ ವಿವರ, ಅವು ಪ್ರವರ್ಧಮಾನಕ್ಕೆ ಬರಲು ಸಹಾಯಕವಾದ ಕಾರಣಗಳು, ಬ್ಯಾಂಕಿಂಗ್ ವ್ಯವಸ್ಥೆಯ ಮೇಲೆ ಹಾಗೂ ಅರ್ಥವ್ಯವಸ್ಥೆಯ ಮೇಲೆ ಅವುಗಳಿಂದಾಗುವ ನೇರ ಹಾಗೂ ದೂರ ಪರಿಣಾಮಗಳು—ಇವುಗಳನ್ನು ಸ್ಥೂಲವಾಗಿ ವಿಶ್ಲೇಷಿಸುವುದು ಸಮಂಜಸವಾದೀತು.

### ಠೇವಣಿಯ ವಿವರಗಳು

ಸಾಮಾನ್ಯವಾಗಿ ಕಂಪನಿಗಳು ಸಾರ್ವಜನಿಕರಿಂದ ಠೇವಣಿಗಳನ್ನು ಎರಡು ವಿಧದಲ್ಲಿ ಸ್ವೀಕರಿಸುತ್ತವೆ:

### ಸಾವಧಿ ಠೇವಣಿ

ಸಾವಧಿ ಠೇವಣಿಯನ್ನು ಒಂದು ವರ್ಷ, ಎರಡು ವರ್ಷ, ಮೂರು ವರ್ಷ ಹೀಗೆ ನಿರ್ದಿಷ್ಟ ಅವಧಿಗೆ ಸ್ವೀಕರಿಸಲಾಗುವುದು. ಬಡ್ಡಿ ದರ ಒಂದು ವರ್ಷ ಅವಧಿಯ ಠೇವಣಿಗೆ ಶೇ. 11.5ರಂತೆಯೂ, ಎರಡು ವರ್ಷ ಅವಧಿಗೆ ಶೇ. 12.5ರಂತೆಯೂ, ಮೂರು ವರ್ಷ ಅವಧಿಗೆ ಶೇ. 14ರಂತೆಯೂ ಇರುತ್ತದೆ (ಇದು ಸಾರ್ವಜನಿಕರಿಗೆ ನೀಡುವ ಬಡ್ಡಿ ದರ. ಕಂಪನಿಯ ನೌಕರರು, ಮಾಜಿ ನೌಕರರು, ಮೃತರಾದ ನೌಕರರ ಕುಟುಂಬದವರು, ಮತ್ತು ಮಾನ್ಯಮಾಡಿದ ಧಾರ್ಮಿಕ ದತ್ತಿ ಸಂಸ್ಥೆಗಳಿಗೆ ಶೇ. 1ರಷ್ಟು ಹೆಚ್ಚುವರಿ ಬಡ್ಡಿ ನೀಡುವ ಅವಕಾಶವಿದೆ). ಬಡ್ಡಿಯನ್ನು ಅರ್ಧ ವಾರ್ಷಿಕ ಅವಧಿಗೆ ನೀಡಲಾಗುವುದು. ಠೇವಣಿಯ ಮೊತ್ತ ಒಂದು ಲಕ್ಷ ರೂಪಾಯಿಗಳಿಗೆ ಮೀರಿದ್ದಲ್ಲಿ ಬಡ್ಡಿಯನ್ನು ತ್ರೈಮಾಸಿಕ ಅವಧಿಗಳಲ್ಲಿ ನೀಡಲಾಗುವುದು.

### ಆವರ್ತಕ ಠೇವಣಿ

ಆವರ್ತಕ ಠೇವಣಿಯನ್ನು ಕನಿಷ್ಠ ಮೂರು ವರ್ಷದ ಅವಧಿಗೆ ಸ್ವೀಕರಿಸಲಾಗುತ್ತದೆ. ಅವಧಿ ತೀರಿದ ನಂತರ ವಿನಿಯೋಜಿಸಿದ ಪ್ರತಿ ಸಾವಿರ ರೂ.ಗಳಿಗೆ 1,515 ರೂ.ಗಳ ಅನುಪಾತದಲ್ಲಿ ಹಿಂತಿರುಗಿಸಲಾಗುತ್ತದೆ. ವಾರ್ಷಿಕವಾಗಿ ಸುಮಾರು ಶೇ. 15ರ ದರದಲ್ಲಿ ಚಕ್ರಬಡ್ಡಿಯನ್ನು ಲೆಕ್ಕಿಸಲಾಗುತ್ತದೆ.

ಠೇವಣಿಗಳನ್ನು ಸ್ವೀಕರಿಸುವ ಮೊತ್ತ ಕನಿಷ್ಠ ಸಾವಿರ ರೂ. ಗಳಷ್ಟಾಗಿದ್ದು, ಸಾವಿರ ರೂ.ಗಳ ಗುಣಕದಲ್ಲಿ ಠೇವಣಿಗಳನ್ನು ನೀಡಬೇಕು. ಠೇವಣಿದಾರನಿಗೆ ಅವಧಿ ಮುನ್ನ ಹಣ ವಾಪಸು ಬೇಕಾಗಿದ್ದಲ್ಲಿ, ವಿನಿಯೋಜಿಸಿದ ಆರು ತಿಂಗಳ ನಂತರ ನೀಡಲಾಗುವುದು. ಬಡ್ಡಿ ದರ ಆ ಅವಧಿಗೆ ಅನ್ವಯವಾಗುವ ಬಡ್ಡಿ ದರಕ್ಕಿಂತ ಶೇ. 2ರಷ್ಟು ಕಡಿಮೆ ಇರುತ್ತದೆ. ಉದಾಹರಣೆಗೆ ಆರು ತಿಂಗಳ ಅನಂತರ ಸಾವಧಿ ಠೇವಣಿಯನ್ನು ಹಿಂಪಡೆಯಲು ಬಯಸಿದಲ್ಲಿ ಬಡ್ಡಿ ದರವು

ಶೇ. 11.5–2 ಅಂದರೆ ಶೇ. 9.5 ಇರುತ್ತದೆ. ಅವಧಿ ಮೀರಿದ ನಂತರ ಠೇವಣಿದಾರ ತಾನು ಇಚ್ಛಿಸಿದಲ್ಲಿ ಠೇವಣಿಯನ್ನು ನವೀಕರಿಸಲೂ ಅವಕಾಶವಿದೆ.

ಯಾವುದೇ ಒಂದು ವರ್ಷದ ಅವಧಿಯಲ್ಲಿ ನೀಡಲಾಗುವ ಅಥವಾ ಸಂಚಿತವಾಗುವ ಬಡ್ಡಿಯ ಮೊತ್ತ ಸಾವಿರ ರೂ.ಗಳನ್ನು ಮೀರಿದಲ್ಲಿ ತೆರಿಗೆಯನ್ನು ಮೂಲದಲ್ಲೇ ಮುರಿದುಕೊಳ್ಳಲಾಗುವುದು. (ಈ ವರಮಾನ ತೆರಿಗೆಯ ದರ ವ್ಯಕ್ತಿಗಳಿಗೆ ಶೇ. 10ರಷ್ಟು ಮತ್ತು ಕಂಪನಿಗಳಿಗೆ ಶೇ. 20.5ರಷ್ಟು) ಮತ್ತು ತತ್ಸಂಬಂಧಿ ಪ್ರಮಾಣಪತ್ರವನ್ನು ಠೇವಣಿದಾರರಿಗೆ ನೀಡಲಾಗುವುದು. ವರಮಾನ ತೆರಿಗೆ ಅಧಿನಿಯಮದ ಪ್ರಕರಣ 197(1)ರ ಅಡಿಯಾಗಲಿ, ಮತ್ತ್ಯಾವುದೇ ಪ್ರಕರಣದಡಿಯಾಗಲಿ ತೆರಿಗೆ ವಿನಾಯಿತಿ ಸೌಲಭ್ಯ ಪಡೆದಿರುವ ಹೂಡಿಕೆದಾರರು ನಮೂನೆ 15 H ಅಥವಾ 15A ಅನ್ವಯ ಪತ್ರಗಳನ್ನು ಬಡ್ಡಿ ನೀಡುವ ದಿನಕ್ಕೆ 21 ದಿನ ಮುಂಚಿತವಾಗಿ ತಲುಪುವಂತೆ ಕಳುಹಿಸಿದರೆ ವರಮಾನ ತೆರಿಗೆಯನ್ನು ಮುರಿದುಕೊಳ್ಳಲಾಗುವುದಿಲ್ಲ. ಅನಿವಾಸಿ ಭಾರತೀಯರೂ ಕೂಡ ಈ ಕಂಪನಿ ಠೇವಣಿಗಳಲ್ಲಿ ತಮ್ಮ ಹಣ ತೊಡಗಿಸಬಹುದು. ಆದರೆ ವಿದೇಶೀ ವಿನಿಮಯ ನಿಯಂತ್ರಣ ಮಾಸ್ಟಿಯಲ್ 24B 4 ರ ಪ್ರಕಾರ ಅಸಲನ್ನು ಹಿಂದಿರುಗಿಸುವಂತೆ ಕೇಳುವ ಹಾಗೂ ಬಡ್ಡಿಯನ್ನು ಮರುಪಾವತಿ ಮಾಡುತ್ತಿಲ್ಲವೆಂಬ ಘೋಷಣಾಪತ್ರವೊಂದನ್ನು ನೀಡಬೇಕು. ಕಂಪನಿ ಠೇವಣಿಗಳ ಸ್ವೀಕಾರದ ಎಲ್ಲ ಅಂಶ "ಕಂಪನಿ (ಠೇವಣಿ ಸ್ವೀಕಾರ) ನಿಯಮ 1975"ಕ್ಕೆ ಅನುಗುಣವಾಗಿರುತ್ತದೆ. ಈ ನಿಯಮದನ್ವಯ ಒಂದು ಕಂಪನಿಯು ತನ್ನ ಒಟ್ಟು ಸಂದಾಯಿತ ಷೇರು ಬಂಡವಾಳ ಮತ್ತು ಮುಕ್ತ ಮೀಸಲುಗಳ ಶೇ. 25ರಷ್ಟನ್ನು ಮಾತ್ರ ಠೇವಣಿಯಾಗಿ ಸ್ವೀಕರಿಸಬಹುದು.

### ಕಂಪನಿ ಠೇವಣಿಯ ಉಗಮ—ಕಾರಣಗಳು

ಬ್ಯಾಂಕ್ ರಾಷ್ಟ್ರೀಕರಣದ ಅವಧಿಯಲ್ಲಿ ಗಣನೀಯ ಮೊತ್ತದ ಠೇವಣಿಯನ್ನು ಸಂಗ್ರಹಿಸಲಾಯಿತು. ಸಾವಿರಾರು ಬ್ಯಾಂಕ್ ಶಾಖೆಗಳ ಜಾಲವನ್ನು ಗ್ರಾಮಾಂತರ ವಲಯದಲ್ಲಿ ನಿರ್ಮಿಸಿದುದು ಬ್ಯಾಂಕ್ ಸಂಪನ್ಮೂಲಗಳು ಹೆಚ್ಚಲು ಕಾರಣವಾದುವು. ಅದುವರೆಗೆ ನಿರ್ಲಕ್ಷಿತಗೊಂಡಿದ್ದ ಕ್ಷೇತ್ರಗಳಾದ ಕೃಷಿ, ಸಣ್ಣ ವ್ಯಾಪಾರ, ಸಾರಿಗೆ, ಸಣ್ಣ ಕೈಗಾರಿಕೆ ಮುಂತಾದ ಆದ್ಯತಾವಲಯದ ಅಗತ್ಯಗಳಿಗೆ ಬ್ಯಾಂಕುಗಳು ವಿಶೇಷ ಪ್ರಾಮುಖ್ಯವನ್ನು ನೀಡಲಾರಂಭಿಸಿದುವು. ಹೀಗೆ ಆದ್ಯತಾವಲಯದಿಂದ ಹೊರಗುಳಿದ ಸಾರ್ವಜನಿಕ ವಲಯದ ಕಂಪನಿಗಳು ಬ್ಯಾಂಕ್ ಸಾಲಸೌಲಭ್ಯದಿಂದ ವಂಚಿತವಾದುವು. ಮೊದಲೇ ಸಂಪನ್ಮೂಲದ ಕೊರತೆಯಿಂದ ಬಾಧಿತವಾಗಿದ್ದ ಆ ಕಂಪನಿಗಳು ಮುಂದೆ ಅನುಷ್ಠಾನಕ್ಕೆ ಬಂದ ಟಂಡನ್ ಅಧ್ಯಯನ ಸಮಿತಿ ಹಾಗೂ ಚೋರೆ ಸಮಿತಿ ಶಿಫಾರಸುಗಳಿಂದ ಹಲವಾರು ರೀತಿಯ ಕಟ್ಟುಪಾಡುಗಳಿಗೆ ಒಳಗಾದುವು. ಬ್ಯಾಂಕ್ ಸಾಲ ನೀತಿಯಲ್ಲಿನ ಈ ಜಟಿಲತನದ ನೀತಿಯಿಂದಾಗಿ ತಿರುಳು ವಲಯವು (Core sector) ಜರ್ಜರಿತವಾದವು. ವಿಶೇಷವಾಗಿ ಅಲ್ಪಾವಧಿಯ (ಚಾಲ್ತಿ ಬಂಡವಾಳ ಅಗತ್ಯ) ಸಾಲಗಳಲ್ಲಿ ಈ ತೊಂದರೆ ಹೆಚ್ಚಾಯಿತು. ಷೇರು ಮತ್ತು ಡಿಬೆಂಚರುಗಳ ಪ್ರಕ್ರಿಯೆಯಲ್ಲಿ ಹಲವಾರು ಪರಿಮಿತಿಗಳಿದ್ದುದರಿಂದ ಈ ವಲಯದ ಕಂಪನಿಗಳು ಆಕರ್ಷಕವಾದ ಠೇವಣಿ ಯೋಜನೆಗಳನ್ನು ರೂಪಿಸುವತ್ತ ಗಮನ ಹರಿಸಿದುವು.

### ಕಂಪನಿ ಠೇವಣಿಗಳ ಬೆಳವಣಿಗೆ—ಅಂಕಿ ಅಂಶಗಳು

ಒಂದು ಅಧ್ಯಯನದ ಪ್ರಕಾರ ಕಂಪನಿಗಳು ಸಂಗ್ರಹಿಸಿದ ಠೇವಣಿಗಳು 1962ರಲ್ಲಿ 400.51 ಕೋಟಿ ರೂ.ಗಳಷ್ಟಿದ್ದು 1978ರ ಹೊತ್ತಿಗೆ 1,313 ರೂಪಾಯಿಗಳಷ್ಟು ಇತ್ತು. ರಾಷ್ಟ್ರೀಕರಣದ ಉತ್ತರದ ಅವಧಿಯಲ್ಲಿ ಕಂಪನಿಗಳು ಕ್ರೋಢೀಕರಿಸಿದ ಠೇವಣಿಯ ಮೊತ್ತ ಅಧಿಕವಾಗಿರುವುದು ಇಲ್ಲಿ ಮಹತ್ವದ ಸಂಗತಿ. ಈ ಠೇವಣಿಗಳು ಒಟ್ಟು ಬ್ಯಾಂಕ್ ಠೇವಣಿಯ ಶೇ. 9.3ರಷ್ಟಿದ್ದುವು. ತೀರ ಇತ್ತೀಚಿನ ವರ್ಷಗಳಲ್ಲಿ ಕಂಪನಿ ಠೇವಣಿಗಳು ಇನ್ನೂ ಬೆಳೆದಿವೆ. ಬ್ಯಾಂಕ್ ಠೇವಣಿಗಳೂ ಅವ್ಯಾಹತವಾಗಿ ಬೆಳೆಯುತ್ತಲೇ ಇವೆ.

### ಕಂಪನಿ ಠೇವಣಿಗಳು—ಪರಿಣಾಮಗಳು

ಕಂಪನಿ ಠೇವಣಿಗಳ ಅಭಿವೃದ್ಧಿ ಹಲವಾರು ಕ್ಷೇತ್ರಗಳ ಮೇಲೆ ಪರಿಣಾಮವನ್ನು ಬೀರಿದೆ. ಅದರಲ್ಲೂ ಬ್ಯಾಂಕಿಂಗ್ ಕ್ಷೇತ್ರದ ಮೇಲೆ ಇದರ ಪರಿಣಾಮ ಮಹತ್ವವಾದುದು. ಬ್ಯಾಂಕುಗಳ ಲಾಭಪ್ರದತೆಯ ಮೇಲೆ ಕಂಪನಿ ಠೇವಣಿಗಳು ಪರೋಕ್ಷವಾದ ಹಿಡಿತವನ್ನು ಸಾಧಿಸಿವೆ. ಹೇಗೆಂದರೆ ಪರಿನಿಯತ ದ್ರವತ್ವ ಅನುಪಾತದ (ಸ್ಟ್ಯಾಚ್ಯುಟರಿ ಲಿಕ್ವಿಡಿಟಿ ರೇಷಿಯೋ) ಪ್ರಕಾರ ಬ್ಯಾಂಕುಗಳು ತಮ್ಮ ಠೇವಣಿಯ ಶೇ. 35ರಷ್ಟನ್ನು ಸುಮಾರು ಶೇ. 10 ಆದಾಯ ತರುವ ಸರಕಾರಿ ಬಂಡವಾಳ ಪತ್ರಗಳಲ್ಲಿ ತೊಡಗಿಸಬೇಕಾಗಿದೆ. ನಗದಿ ಮೀಸಲು ಅನುಪಾತ (Cash Reserve Ratio) ಶೇ. 9. ಆದ್ಯತಾವಲಯ ಸಾಲಗಳು, ಸಾಮಾಜಿಕ ಬ್ಯಾಂಕಿಂಗ್ ಮುಂತಾದ ಅಗತ್ಯಗಳನ್ನು ಪೂರೈಸಿದ ನಂತರ ಮುಕ್ತವಾಗಿ ಉಳಿಯುವುದು ಬ್ಯಾಂಕ್ ಸಂಪನ್ಮೂಲಗಳ ಶೇ. 20ರಷ್ಟು ಮಾತ್ರ. ಈ ಭಾಗವನ್ನು ಕಂಪನಿ ವಲಯದ ಸಾಲಗಾರರಿಗೆ ನೀಡಿ ಶೇ. 16ರಷ್ಟು ಆದಾಯವನ್ನು ಪಡೆಯಬಹುದಾಗಿದೆ. ಹೀಗಿರುವಾಗ ಸಾರ್ವಜನಿಕ ಕಂಪನಿಗಳು ತಮ್ಮ ಚಾಲ್ತಿ ಬಂಡವಾಳದ ಅಗತ್ಯಗಳಿಗೆ ನೇರವಾಗಿ ಸಾರ್ವಜನಿಕ ಠೇವಣಿಯನ್ನು ಅವಲಂಬಿಸಿರುವುದರಿಂದ, ಬ್ಯಾಂಕರನ ಮೂಲಭೂತ ಕಾರ್ಯಾ

ಚರಣೆಯಾದ ಠೇವಣಿ ಸ್ವೀಕಾರ, ಮುಂಗಡ ನೀಡಿಕೆ, ನಡುವಣ ವರಮಾನ ಅಂತರದಿಂದ ಲಾಭಪ್ರದತೆ ಇವುಗಳಿಗೆ ಕೊಡಲಿಪೆಟ್ಟು ಬಿದ್ದಂತಾಗಿದೆ. ದೇಶದ ಅರ್ಥವ್ಯವಸ್ಥೆಯ ಮೇಲೆ ಕೂಡ ಕಂಪನಿ ಠೇವಣಿಗಳು ನೇರವಾದ ಪರಿಣಾಮವನ್ನು ಬೀರುತ್ತವೆ. ಕಂಪನಿ ಠೇವಣಿಗಳು ಬ್ಯಾಂಕಿಂಗ್ ವ್ಯವಸ್ಥೆಯ ಹೊರಗೆ ಇರುವುದರಿಂದ ಅಷ್ಟು ಪ್ರಮಾಣದ ಹಣ ಉದರಿ ಸೃಷ್ಟಿಯ ಪರಿಧಿಯಲ್ಲಿ ಬರದೆ ಇರುವುದರಿಂದ ಹಣದುಬ್ಬರಕ್ಕೆ ಸ್ವಲ್ಪಮಟ್ಟಿಗೆ ತಡೆ ಬೀಳುತ್ತದೆ ಎಂಬುದು ಕೆಲವರ ಅಭಿಪ್ರಾಯ. ಆದರೆ ಕಂಪನಿ ಠೇವಣಿಯು ಸ್ವತಂತ್ರವಾಗಿರುವುದರಿಂದ ರಿಸರ್ವ್ ಬ್ಯಾಂಕ್ ಜಾರಿ ಮಾಡುವ ಯಾವುದೇ ನಿಯಂತ್ರಣದ ಹಿಡಿತಕ್ಕೂ ಸಿಕ್ಕದೆ ಹಣದುಬ್ಬರದ ವೃದ್ಧಿಗೆ ಕಾರಣವಾಗುತ್ತದೆ. ಉದಾಹರಣೆಗೆ ಆಯ್ದ ಉದರಿ ನಿಯಂತ್ರಣದ (Selective Credit Control) ಪ್ರಕಾರ ಒಂದು ನಿರ್ದಿಷ್ಟ ವಸ್ತುವಿನ ಆಧಾರವಾಗಿ ಮುಂಗಡ ನೀಡಲು ನಿರ್ಬಂಧ ವಿಧಿಸಿದರೆ, ಆ ಕಂಪನಿಗಳು ನೇರವಾಗಿ ಸಾರ್ವಜನಿಕ ಠೇವಣಿಯನ್ನು ಸ್ವೀಕರಿಸುವುದರ ಮೂಲಕ ರಿಸರ್ವ್ ಬ್ಯಾಂಕ್‌ನ ಈ ಉದರಿ ನಿಯಂತ್ರಣದ ಉಪಕರಣದ ಮಹತ್ವವನ್ನೇ ಕುಂಠಿತಗೊಳಿಸುತ್ತವೆ. ಸಂಘಟಿತ ಹಾಗೂ ಅಸಂಘಟಿತ ಹಣ ಮಾರುಕಟ್ಟೆಗಳ ದ್ವಂದ್ವ (Dichotony) ಇರುವ ಭಾರತದಂತಹ ದೇಶದಲ್ಲಿ ಇದರ ದುಷ್ಪರಿಣಾಮಗಳನ್ನು ಹಿಂದಿನ ಹಲವಾರು ಅನುಭವಗಳಿಂದ ತಿಳಿಯಬಹುದಾಗಿದೆ.

ಆರ್ಥಿಕ ಅಸಮಾನತೆ ಮತ್ತು ಹಣದ ಅನಾರೋಗ್ಯಕರ ಕೇಂದ್ರೀಕರಣಕ್ಕೆ ಕೂಡ ಈ ಕಂಪನಿ ಠೇವಣಿಗಳು ದಾರಿಯಾಗಿವೆ. ವಿವಿಧ ಕ್ಷೇತ್ರಗಳ ನಡುವೆ ಸಂಪನ್ಮೂಲದ ಸಮಾನ ಹಂಚಿಕೆಯ ತತ್ವಕ್ಕೂ ಮಾರಕವಾಗಿವೆ. ಪ್ರಾದೇಶಿಕ ಅಸಮತೋಲ ಕೂಡ ಇದರ ಇನ್ನೊಂದು ಉತ್ಪನ್ನ. ಕಂಪನಿ ಠೇವಣಿಗಳ ಶೇ. 80ರಷ್ಟು ಕೈಗಾರಿಕೆಯಲ್ಲಿ ಮುಂದುವರಿದ ಪ್ರದೇಶವಾದ ಮಹಾರಾಷ್ಟ್ರ ಗುಜರಾತ್‌ಗಳಲ್ಲಿದೆ.

ವಿನಿಯೋಜಕರ ದೃಷ್ಟಿಯಿಂದಲೂ ಕಂಪನಿ ಠೇವಣಿಗಳು ಗೊಂದಲವನ್ನು ಹುಟ್ಟಿಸಿವೆ. ದೇಶಾದ್ಯಂತ ಹಬ್ಬಿರುವ ಅಸಂಖ್ಯಾತ ಕಂಪನಿಗಳಲ್ಲಿ ಠೇವಣಿಯಾಗಿ ಇಡುವುದರ ಮೂಲಕ ವಿನಿಯೋಜಕ ಸಂಪೂರ್ಣವಾಗಿ ನಷ್ಟಸಂಭವಕ್ಕೆ ಈಡಾಗಿದ್ದಾನೆ.

### ಬ್ಯಾಂಕ್ ಠೇವಣಿ ಮತ್ತು ಕಂಪನಿ ಠೇವಣಿ: ಒಂದು ಹೋಲಿಕೆ

ಕಂಪನಿ ಠೇವಣಿಯಲ್ಲಿರುವ ಅಸಮರ್ಪಕತೆಯನ್ನು ಪ್ರಖರಗೊಳಿಸಿ, ಬ್ಯಾಂಕ್ ಠೇವಣಿಗಳ ಮಹತ್ವನನ್ನು ಪರಿಚಯಮಾಡಿಕೊಡುವ ಜಾಹೀರಾತುಗಳು ಇಂದು ಜಾರಿಯಲ್ಲಿವೆ. ಕೇವಲ ಬಡ್ಡಿ ದರದ ಹೆಚ್ಚಳದಿಂದ ಮಾತ್ರ ವಿನಿಯೋಜಕರನ್ನು ಆಕರ್ಷಿಸುತ್ತಿರುವ ಕಂಪನಿ ಠೇವಣಿಗಳಿಗೆ ಇದೊಂದು ಗುಣಾತ್ಮಕವಾದ ಸ್ಪರ್ಧೆಯಾಗಿದೆ. ಈ ಹೋಲಿಕೆಯ ಮುಖ್ಯ ಅಂಶಗಳೆಂದರೆ :

1 ಬ್ಯಾಂಕ್ ಠೇವಣಿ ಜನಪ್ರಿಯವಾದದ್ದು. ಇದು ಈಗ ಸುಮಾರು ಸಾವಿರ ಕೋಟಿಗಳಷ್ಟು ಇದೆ. ಪ್ರತಿ ವರ್ಷ ಅದು ಹೆಚ್ಚುತ್ತಿದೆ. ಕಂಪನಿ ಠೇವಣಿಗಳು ಕಡಿಮೆ ಜನಪ್ರಿಯವಾದವು. ಈಗಿನ ಕಂಪನಿ ಠೇವಣಿಗಳ ಒಟ್ಟು ಮೊತ್ತ ಅಧಿಕವಾಗಿಯೇ ಇದೆಯಾದರೂ ಅವು ಅನಾಕರ್ಷಕವಾಗುತ್ತಿವೆ.

2 ಬ್ಯಾಂಕ್ ಠೇವಣಿಗಳಿಗೆ ನಷ್ಟಸಂಭವದ ಅವಕಾಶವೇ ಇಲ್ಲ. ಆದರೆ ಕಂಪನಿ ಠೇವಣಿಗಳ ವಿಷಯದಲ್ಲಿ ಅಂತಹ ಯಾವುದೇ ಭದ್ರತೆಯಿಲ್ಲ.

3 ಠೇವಣಿ ವಿಮೆ ಯೋಜನೆಯಂತೆ 30,000 ರೂಪಾಯಿ ವರೆಗಿನ ಬ್ಯಾಂಕ್ ಠೇವಣಿಯನ್ನು ವಿಮೆ ಮಾಡಲಾಗಿರುತ್ತದೆ. ಕಂಪನಿ ಠೇವಣಿಗೆ ಅಂತಹ ಯಾವುದೇ ವ್ಯವಸ್ಥೆಯಿಲ್ಲ.

4 ಬ್ಯಾಂಕ್ ಠೇವಣಿಗಳ ಆಧಾರದಿಂದ ಸಾಲ ಪಡೆಯಬಹುದು. ಆದರೆ ಕಂಪನಿಯ ಠೇವಣಿಯ ಆಧಾರದಿಂದ ಸಾಲ ಪಡೆಯುವ ಅವಕಾಶವಿಲ್ಲ.

5 ಬ್ಯಾಂಕುಗಳು ಬಡ್ಡಿ ಹಾಗೂ ಹಣವನ್ನು ಸಮರ್ಥವಾಗಿ ವಾಪಸು ಮಾಡುತ್ತವೆ. ಕಂಪನಿಗಳ ವಿಷಯದಲ್ಲಿ ಈ ಭರವಸೆಯಿಲ್ಲ. ವಿಳಂಬಗಳು ಸರ್ವೇಸಾಧಾರಣ. ಹಣ ವಾಪಸು ಪಡೆಯಲು ತೊಂದರೆಯಾದರೆ ಕಾನೂನು ಕ್ರಮ ವಿನಾ ಅನ್ಯಥಾ ಮಾರ್ಗವಿಲ್ಲ. ಅದರಿಂದ ವೃಥಾ ಹಣ ಹಾಗೂ ಕಾಲವ್ಯಯ.

6 ಬ್ಯಾಂಕ್ ಠೇವಣಿಯನ್ನು ಅವಧಿಗೆ ಮೊದಲೇ ವಾಪಸು ಪಡೆಯಬಹುದು (ದ್ರವತ್ವ ಇದೆ) ಕಂಪನಿ ಠೇವಣಿಯನ್ನು ಅವಧಿಗೆ ಮೊದಲೇ ವಾಪಸು ಪಡೆಯುವುದು ಪ್ರಯಾಸಕರ.

7 ಸಾವಧಿ ಠೇವಣಿಯಲ್ಲಿ ಬ್ಯಾಂಕು ಚಕ್ರಬಡ್ಡಿ ನೀಡುತ್ತದೆ. ಕಂಪನಿ ಠೇವಣಿಯಿಂದ ಲಭ್ಯವಾಗುವುದು ಸರಳ ಬಡ್ಡಿ ಮಾತ್ರ.

8 ಬ್ಯಾಂಕ್ ಠೇವಣಿಯಿಂದ ಸಂಪಾದಿಸಿದ ಬಡ್ಡಿಗೆ ಮೂಲದಲ್ಲೇ ಕರವನ್ನು ಮುರಿದುಕೊಳ್ಳುವುದಿಲ್ಲ. ಆದರೆ ಕಂಪನಿ ಠೇವಣಿಗಳ ಮೇಲಿನ ಬಡ್ಡಿಯ ಶೇ. 10ರಷ್ಟನ್ನು ಮೂಲದಲ್ಲೇ ಮುರಿದುಕೊಳ್ಳಲಾಗುವುದು.

9 ವಿವಿಧ ಠೇವಣಿ ಯೋಜನೆಗಳ ಅನ್ವಯ ಬ್ಯಾಂಕುಗಳು ಇಪ್ಪತ್ತು ರೂ.ಗಳಷ್ಟು ಮೊತ್ತವನ್ನೂ ಠೇವಣಿಯಾಗಿ ಸ್ವೀಕರಿಸುತ್ತವೆ. ಆದರೆ ಕಂಪನಿಯು

ಠೇವಣಿಯಾಗಿ ಸ್ವೀಕರಿಸುವ ಕನಿಷ್ಠ ಮೊತ್ತ ಸಾವಿರ ರೂ.ಗಳು. ಅಲ್ಲದೆ ಕಂಪನಿ ಠೇವಣಿಯು ವೈವಿಧ್ಯ ಪಡೆದಿಲ್ಲ.

10 ಠೇವಣಿ ಸಂಗ್ರಹಣೆ ಬ್ಯಾಂಕುಗಳ ಪ್ರಧಾನ ಕಾರ್ಯ. ಆದುದರಿಂದ ಸಾರ್ವಜನಿಕರ ಠೇವಣಿಯನ್ನು ವ್ಯವಸ್ಥಿತವಾಗಿ ನಿರ್ವಹಿಸಲು ಅವಕ್ಕೆ ಸಾಧ್ಯ. ಕಂಪನಿಗಳಲ್ಲಿ ಇಂಥ ವ್ಯವಸ್ಥೆಯಿಲ್ಲ.

11 ಠೇವಣಿ ಸಂಗ್ರಹಣಾ ಕಾರ್ಯದಲ್ಲಿ ಬ್ಯಾಂಕುಗಳು ವಿಶೇಷ ಪರಿಶ್ರಮವನ್ನು ಹೊಂದಿವೆ. ಆದರೆ ಕಂಪನಿಗಳಲ್ಲಿ ಈ ಪ್ರವೃತ್ತಿ ತೀರ ಇತ್ತೀಚಿನದು.

12 ಠೇವಣಿದಾರರಿಗೆ ಅನುಕೂಲವಾಗುವಂತೆ ಬ್ಯಾಂಕುಗಳು ವಿಸ್ತೃತವಾದ ಶಾಖಾಜಾಲವನ್ನು ಹೊಂದಿದೆ. ಕಂಪನಿಯ ವಿಷಯದಲ್ಲಿ ಇಂಥ ಸೌಲಭ್ಯವಿಲ್ಲ. ಬ್ಯಾಂಕ್ ಠೇವಣಿಯನ್ನು ಶಾಖೆಯಿಂದ ಶಾಖೆಗೆ ಬದಲಾಯಿಸಬಹುದು.

13 ಬ್ಯಾಂಕುಗಳು ಲಾಕರ್ ಸೌಲಭ್ಯ. ಭದ್ರತಾ ಠೇವಣಿ. ಭದ್ರತಾ ಸುಪರ್ದು, ಹಣ ರವಾನೆ ವ್ಯವಸ್ಥೆ, ವಿದೇಶೀ ವಿನಿಮಯ ವ್ಯವಹಾರ ಮುಂತಾದ ವಿಶಿಷ್ಟ ಸೇವೆಗಳನ್ನು ನೀಡುತ್ತವೆ. ಕಂಪನಿ ಠೇವಣಿಯಲ್ಲಿ ಇಂಥ ಯಾವುದೇ ಸೌಲಭ್ಯಗಳಿಲ್ಲ.

14 ಬ್ಯಾಂಕುಗಳು ಸಂಗ್ರಹಿಸಿದ ಠೇವಣಿಗಳನ್ನು ವಿವಿಧ ಸಾಮಾಜಿಕ ಉದ್ದೇಶದ ಕಾರ್ಯಗಳಿಗಾಗಿ ಬಳಸಲಾಗುವುದು. ಆದರೆ ಕಂಪನಿ ಸಂಗ್ರಹಿಸಿದ ಠೇವಣಿಗಳನ್ನು ಆ ಕಂಪನಿಯ ಉದ್ದೇಶಗಳಿಗೆ ಮಾತ್ರ ಬಳಸಲಾಗುವುದು.

**ಬ್ಯಾಂಕ್ ಠೇವಣಿಗೆ ಕಂಪನಿ ಠೇವಣಿ ಪ್ರತಿಸ್ಪರ್ಧಿಯೆ?**

ಬ್ಯಾಂಕ್ ಠೇವಣಿಗೆ ಕಂಪನಿ ಠೇವಣಿಗಳ ಸಂಗ್ರಹಣೆ ಸ್ಪರ್ಧೆ ನೀಡುತ್ತಿದೆಯೆ ? ಎಂಬುದು ಇಂದಿನ ದಿನಗಳಲ್ಲಿ ಚರ್ಚೆಯ ವಿಷಯವಾಗಿದೆ. ಇತ್ತೀಚಿನ ವಿಶ್ಲೇಷಣೆಯಂತೆ ಬ್ಯಾಂಕ್ ಠೇವಣಿಯಲ್ಲಿನ ಹೆಚ್ಚಳವು ಅನೇಕ ಆರ್ಥಿಕತಜ್ಞರ ಗಾಬರಿಯ ವಿಷಯವಾಗಿದೆ. ಉದರಿ ಠೇವಣಿ ಅನುಪಾತದ ಕುಸಿತ, ಹೆಚ್ಚುವರಿ ಠೇವಣಿ ತರುವ ಆರ್ಥಿಕ ಅನಾಹುತಗಳು ಇವುಗಳನ್ನು ಪರಿಶೀಲಿಸಲಾಗುತ್ತದೆ. ಠೇವಣಿಗಳ ಹೆಚ್ಚಳ ಬ್ಯಾಂಕುಗಳಲ್ಲಿ ಹೆಚ್ಚುವರಿ ದ್ರವತ್ವ ಉಂಟು ಮಾಡಿದೆ. ಬ್ಯಾಂಕ್ ಉದರಿಯ ಬೇಡಿಕೆ ಸ್ವಲ್ಪ ಮಟ್ಟಿಗೆ ಕುಸಿದಿದೆ. ಹೀಗಿರುವಾಗ ಕಂಪನಿ ವಲಯ ಠೇವಣಿಯಿಂದ ಬ್ಯಾಂಕ್ ಠೇವಣಿ ಸ್ಪರ್ಧೆ ಎದುರಿಸುತ್ತಿದೆಯೆ ಎಂಬುದು ಇನ್ನೂ ವಿವಾದದ ಅಂಶವಾಗಿದೆ.

---

**ಬ್ಯಾಂಕು ಠೇವಣಿಗಳು ಹೆಚ್ಚು ಆಕರ್ಷಕವಾಗುವಂತೆ ಮಾಡಲು ಈ ಮುಂದಿನ ಕೆಲವು ಸಲಹೆಗಳನ್ನು ಪರಿಗಣಿಸಬಹುದಾಗಿದೆ :**

(i) ವರಮಾನ ತೆರಿಗೆ ಅಧಿನಿಯಮದ 80 (ಸಿ) ಪ್ರಕರಣದ ಅಡಿಯಲ್ಲಿ ತೆರಿಗೆ ವಿನಾಯತಿ : ರಾಷ್ಟ್ರೀಯ ಉಳಿತಾಯ ಪತ್ರಗಳಲ್ಲಿ (vi ಮತ್ತು vii ಶ್ರೇಣಿ) ಹೂಡಿದ ಹಣವನ್ನು ವರಮಾನದಿಂದ ಕಳೆದು ಉಳಿದವನ್ನು ತೆರಿಗೆ ವಿಧಿಸುವ ವರಮಾನವಾಗಿ ಪರಿಗಣಿಸುವಂತೆ. ಬ್ಯಾಂಕು ಠೇವಣಿಯಲ್ಲಿ ವಿನಿಯೋಗಿಸಿದ ಹಣಕ್ಕೂ ಈ ವಿನಾಯತಿಯನ್ನು ವಿಸ್ತರಿಸಬಹುದು.

(ii) ಬ್ಯಾಂಕು ಠೇವಣಿಗಳ ಮೇಲೆ ಬಡ್ಡಿಯ ದರವನ್ನು ಏರಿಸಬಹುದು.

(iii) ಬ್ಯಾಂಕು ಠೇವಣಿಗಳ ಮೇಲೆ ಗಳಿಸಿದ ಬಡ್ಡಿಯನ್ನು ತೆರಿಗೆ ಮುಕ್ತವಾಗಿ ಮಾಡುವ ಮಿತಿಯನ್ನು 10,000ಕ್ಕೆ ಹೆಚ್ಚಿಸಬಹುದು.

# ಭಾರತೀಯ ಸ್ಟೇಟ್ ಬ್ಯಾಂಕ್ ಉದ್ಯೋಗಿಗಳ ಸಂಘಟನೆ: ಒಂದು ಸಮೀಕ್ಷೆ

ಶಾಂತರಾಜು

ನಾಗರಿಕತೆಯ ಆರಂಭದಿಂದಲೂ ಮಾನವ ದಬ್ಬಾಳಿಕೆ, ದೌರ್ಜನ್ಯ ಮತ್ತು ಕ್ರೌರ್ಯದ ವಿರುದ್ಧ ತಿರುಗಿಬೀಳುತ್ತಲೇ ಬಂದಿದ್ದಾನೆ. ಉಳ್ಳವರು ಉಳ್ಳದವರನ್ನು ಅನವರತ ಶೋಷಿಸುತ್ತ ಬಂದಿದ್ದಾರೆ. ಇವರೀರ್ವರ ನಡುವೆಯ ಕಂದಕ ದಿನೇದಿನೇ ಬೆಳೆಯುತ್ತಿದೆ. ಇಂದು ರಾಷ್ಟ್ರದ ಉತ್ಪಾದನೆಯ ಸಿಂಹಪಾಲು, ಅಂದರೆ ಶೇಕಡ 50ಕ್ಕೂ ಮೇಲ್ಪಟ್ಟು, ಮೇಲ್ವರ್ಗದ ಶೇಕಡ 10 ಮಂದಿಯ ಜನರ ಕಿಸೆಗೆ. ಈ ಶಕ್ತಿಗಳ ವಿರುದ್ಧ ಕಾರ್ಮಿಕರು ಹೋರಾಟ ನಡೆಸುತ್ತಲೇ ಇದ್ದಾರೆ. ಈ ಹೋರಾಟ ಮಾನವನ ಇತಿಹಾಸದಷ್ಟು ಹಳತು.

ಇಂದು ಕಾರ್ಮಿಕ ತಾನು ಸುರಿಸಿದ ಬೆವರಿಗೆ, ಬಸಿದ ರಕ್ತಕ್ಕೆ ಬೆಲೆ ಹಚ್ಚುತ್ತಾನೆ. ಪ್ರತಿಫಲ ಬಯಸುತ್ತಾನೆ. ಅನ್ಯಾಯವಾದಲ್ಲಿ ಪ್ರತಿಭಟಿಸುತ್ತಾನೆ. ಆವಶ್ಯಕವಾದಲ್ಲಿ ಹೋರಾಟಕ್ಕೂ ನಿಲ್ಲುತ್ತಾನೆ. ಈ ಹೋರಾಟ ಏಕ ವ್ಯಕ್ತಿಯ ಹೋರಾಟವಾದಲ್ಲಿ ದುರ್ಬಲವೆಂದು ಬಲ್ಲ ಕಾರ್ಮಿಕ ಸಂಘಟಿತನಾಗುತ್ತಾನೆ. ಪ್ರತಿಯೊಂದು ಸಂಘಟನೆಯ ಹಿಂದೆಯೂ ದೌರ್ಜನ್ಯದ, ದಬ್ಬಾಳಿಕೆಯ ಮತ್ತು ಶೋಷಣೆಯ ಬವಣೆಯನ್ನುಂಡ ಕಹಿಯನುಭವದ ಕಥೆಯಿರುತ್ತದೆ.

ಕೇವಲ ಹಣಕಾಸಿನ ಬಡ್ಡಿ ವ್ಯವಹಾರಕ್ಕೆ ಮಾತ್ರ ಸೀಮಿತವಾಗಿದ್ದ ಭಾರತೀಯ ಬ್ಯಾಂಕ್ ಉದ್ಯಮಕ್ಕೆ ನಾಡಿಗೆ ಬಂದ ಸ್ವಾತಂತ್ರ್ಯ ಒಂದು ಹೊಸ ಆಯಾಮವನ್ನು ದೊರಕಿಸಿಕೊಟ್ಟಿತು. ಜನತೆಗೆ ಸಿಕ್ಕ ಸ್ವಾತಂತ್ರ್ಯ ಅರ್ಥಪೂರ್ಣವಾಗಬೇಕಾದರೆ, ಆ ಸ್ವಾತಂತ್ರ್ಯ ಭೌಗೋಳಿಕ ಮತ್ತು ರಾಜಕೀಯದ್ದಾದರೆ ಸಾಲದು. ಅದು ಜನಸಾಮಾನ್ಯನ ಆರ್ಥಿಕ ಸ್ವಾತಂತ್ರ್ಯವೂ ಆಗಬೇಕೆಂಬ, ನಾಡಿನ ನಾಯಕರ ಹಿರಿಯಾಸೆಗೆ ಚುಕ್ಕಾಣಿ ಹಿಡಿಯುವ ಜವಾಬ್ದಾರಿ ಬ್ಯಾಂಕ್ ಉದ್ಯಮದ್ದಾಯಿತು. ಬಡತನ ರೇಖೆಯ ಕೆಳಗೆ ಬದುಕುತ್ತಿರುವ ಶೇಕಡ 40ಕ್ಕೂ ಹೆಚ್ಚು ಮಂದಿಯ ಭವಿಷ್ಯದ ಸುಧಾರಣೆಯೇ ರಾಷ್ಟ್ರದ ಎಲ್ಲ ಯೋಜನೆಗಳ ಮೂಲ ಉದ್ದೇಶ. ಈ ಆರ್ಥಿಕ ಸಾಧನೆಗೆ ನಾಡಿನ ಉದ್ದಗಲಕ್ಕೂ ಬೆಳೆದಿರುವ ಬ್ಯಾಂಕಿಂಗ್ ಉದ್ಯಮವೇ ಜೀವನಾಡಿ. ಉದ್ಯಮದ ಧ್ಯೇಯೋದ್ದೇಶಗಳು ಬದಲಾವಣೆಯಾದ ಹಾಗೆಲ್ಲ, ಇದರಲ್ಲಿ ದುಡಿಯುತ್ತಿರುವ ಸಾವಿರಾರು ಉದ್ಯೋಗಿಗಳ ಸೇವಾನಿಯಮಗಳಲ್ಲಿ ಮತ್ತು ಉದ್ಯಮಿ—ಉದ್ಯೋಗಿಗಳ ಸಂಬಂಧಗಳಲ್ಲಿ ತೀವ್ರ ಬದಲಾವಣೆ ಅನಿವಾರ್ಯ. ಈ ಬದಲಾವಣೆಯಲ್ಲಿ ಉದ್ಯೋಗಿಗಳ ಸಂಘಗಳು ಪ್ರಮುಖ ಪಾತ್ರ ವಹಿಸುತ್ತಿವೆ. ರಾಷ್ಟ್ರದ ಕೆಲವೇ ಶಕ್ತಿಯುತ ವ್ಯವಸ್ಥಿತ ದುಡಿಮೆಗಾರರ ಸಂಘಟನೆಗಳಲ್ಲಿ ಬ್ಯಾಂಕ್ ಉದ್ಯೋಗಿಗಳ ಸಂಘಟನೆ ಪ್ರಮುಖವಾದದ್ದಾಗಿದೆ.

ಈ ಸಂಘಟನೆ ಬೆಳೆದು ಬಂದ ದಾರಿಯನ್ನು ಗುರುತಿಸಬೇಕಾದರೆ ಆವಶ್ಯಕವಾಗಿ ಬ್ಯಾಂಕೋದ್ಯಮ ಬೆಳೆದುಬಂದ ರೀತಿಯನ್ನು ಸಹ ಪರಾಮರ್ಶಿಸಬೇಕಾಗುತ್ತದೆ.

## ಉದ್ಯಮದ ಬೆಳವಣಿಗೆ

ಬ್ಯಾಂಕೋದ್ಯಮ ಬ್ರಿಟಿಷರು ಭಾರತಕ್ಕೆ ನೀಡಿದ ಅನೇಕ ಉಡುಗೊರೆಗಳಲ್ಲಿ ಒಂದು. ವ್ಯಾಪಾರಕ್ಕೆಂದು ಬಂದ ಈ ಭೂಪಿಪಾಸಿಗಳು ಕಾಲಕ್ರಮೇಣ ಇಡೀ ಭರತಖಂಡವನ್ನೇ ಅಡಿಯಾಳನ್ನಾಗಿ ಮಾಡಿಕೊಂಡಾಗ ಅವರಿಗೆ ಆಡಳಿತವನ್ನು ಸುಸೂತ್ರವಾಗಿ ನಡೆಸಲು ರೈಲುಮಾರ್ಗಗಳು ಹೇಗೆ ಅಗತ್ಯವಿದ್ದುವೋ ಹಾಗೆಯೇ ದಿನನಿತ್ಯದ ವಾಣಿಜ್ಯ ವ್ಯವಹಾರಗಳಿಗೆ ವ್ಯವಸ್ಥಿತವಾದ ಬ್ಯಾಂಕಿಂಗ್ ಉದ್ಯಮ ಅನಿವಾರ್ಯವಾಗಿತ್ತು. ಇದರಿಂದಾಗಿ ಬ್ರಿಟಿಷರು ಅನುಕ್ರಮವಾಗಿ ಬಂಗಾಳ ಪ್ರೆಸಿಡೆನ್ಸಿ ಬ್ಯಾಂಕ್, ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕ್ ಮತ್ತು ಮದ್ರಾಸು ಪ್ರೆಸಿಡೆನ್ಸಿ ಬ್ಯಾಂಕುಗಳನ್ನು ಆರಂಭಿಸಿದರು. 19ನೆಯ ಶತಮಾನದ ಆರಂಭದ ಹೊತ್ತಿಗೆ ಬ್ರಿಟಿಷ್ ಸರಕಾರ ಒಂದು ವ್ಯವಸ್ಥಿತ ಬ್ಯಾಂಕಿಂಗ್ ಉದ್ಯಮವನ್ನು ಪಡೆದಿತ್ತು. 19ನೆಯ ಶತಮಾನದ ಆರಂಭದಲ್ಲಿ ಕೆಲವು ಖಾಸಗಿ ಕ್ಷೇತ್ರಗಳಲ್ಲೂ ಪ್ರಯತ್ನಗಳು ನಡೆದು ಸಣ್ಣ ಪ್ರಮಾಣದಲ್ಲಿ ಕೆಲವು ಬ್ಯಾಂಕುಗಳು ಪ್ರಾರಂಭವಾದುವು.

1921ರಲ್ಲಿ ಪ್ರತ್ಯೇಕ ವ್ಯವಹಾರ ನಡೆಸುತ್ತಿದ್ದ ಬಂಗಾಳ ಪ್ರೆಸಿಡೆನ್ಸಿ ಬ್ಯಾಂಕ್, ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕ್ ಮತ್ತು ಮದ್ರಾಸು ಪ್ರೆಸಿಡೆನ್ಸಿ ಬ್ಯಾಂಕ್‌ಗಳು ಕೂಡಿ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯ ಸ್ಥಾಪನೆಯಾಯಿತು. 1935ರಲ್ಲಿ ರಿಸರ್ವ್ ಬ್ಯಾಂಕ್ ಪ್ರಾರಂಭವಾಗಿ ರಾಷ್ಟ್ರದ ಕೇಂದ್ರ ಬ್ಯಾಂಕಿಂಗ್ ಕಾರ್ಯನಿರ್ವಹಣೆಯನ್ನು ಅದು ವಹಿಸಿಕೊಂಡು ಪ್ರತಿಯಾಗಿ ಸರ್ಕಾರಿ ಹಣಕಾಸಿನ ವ್ಯವಹಾರದ ಸ್ವಾಮ್ಯವನ್ನು ಇಂಪೀರಿಯಲ್ ಬ್ಯಾಂಕಿಗೆ ನೀಡಿತು. (ಸ್ವಾತಂತ್ರ್ಯಾನಂತರ ಇಂಪೀರಿಯಲ್ ಬ್ಯಾಂಕ್ ಭಾರತೀಯ ಸ್ಟೇಟ್ ಬ್ಯಾಂಕ್ ಆಯಿತು.) ಈ ಸ್ವಾಮ್ಯವನ್ನು ಇತ್ತೀಚೆಗೆ ಅಂದರೆ ರಾಷ್ಟ್ರದ 14 ಪ್ರಮುಖ ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣವಾಗುವವರೆಗೆ ಭಾರತೀಯ ಸ್ಟೇಟ್ ಬ್ಯಾಂಕ್ ಪಡೆದಿತ್ತು. ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದು 8 ವರ್ಷಗಳ ನಂತರ ಇಂಪೀರಿಯಲ್ ಬ್ಯಾಂಕನ್ನು ಶ್ರೀ ವೆಂಕಟಪ್ಪಯ್ಯನವರು ರೂರಲ್ ಕ್ರೆಡಿಟ್ ಸರ್ವೆಯ ಸಮಿತಿ ಪರವಾಗಿ ಮಂಡಿಸಿದ ಶಿಫಾರಸ್ಸಿನ ಮೇರೆ ಭಾರತೀಯ ಸ್ಟೇಟ್ ಬ್ಯಾಂಕನ್ನಾಗಿ ಸಂಸತ್ತಿನ ನಿರ್ಣಯದಿಂದ 1955ರಲ್ಲಿ ಪರಿವರ್ತಿಸಲಾಯಿತು. ನಂತರ ಇದರೊಟ್ಟಿಗೆ ಸಹ ಬ್ಯಾಂಕ್‌ಗಳಾದ ಮೈಸೂರು ಬ್ಯಾಂಕ್, ಹೈದರಾಬಾದು ಬ್ಯಾಂಕ್ ಮುಂತಾದ 7 ಬ್ಯಾಂಕುಗಳನ್ನು ವಿಲೀನಗೊಳಿಸಲಾಯಿತು.

### ಕಾರ್ಮಿಕ ಸಂಘಟನೆ

ಭಾರತೀಯ ಕಾರ್ಮಿಕ ಸಂಘ ಅಧಿನಿಯಮ ಜಾರಿಗೆ ಬರುವುದಕ್ಕೆ 2 ವರ್ಷ ಮುಂಚೆಯೇ ಅಂದರೆ 1924ರಲ್ಲಿ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯದ ಉದ್ಯೋಗಿಗಳು ಬ್ಯಾಂಕ್ ಉದ್ಯೋಗಿಗಳ ಸಂಘಟನೆಯ ಮೊದಲ ತುತ್ತೂರಿಯನ್ನು ಊದಿದರು. ಅಂದು ಆರಂಭವಾದ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯದ ಸಿಬ್ಬಂದಿ ಸಂಘ ಬ್ಯಾಂಕ್ ಉದ್ಯೋಗಿಗಳ ಸಂಘಟನೆಯ ಇತಿಹಾಸದ ಮೊದಲ ಮೈಲಿಗಲ್ಲು. ಆ ಹೊತ್ತಿಗೆ ಬಂಗಾಳ ಪ್ರೆಸಿಡೆನ್ಸಿ ಬ್ಯಾಂಕ್, ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕ್ ಮತ್ತು ಮದ್ರಾಸು ಪ್ರೆಸಿಡೆನ್ಸಿ ಬ್ಯಾಂಕ್ ಸಮ್ಮಿಳಿತವಾಗಿ ಇಂಪೀರಿಯಲ್ ಬ್ಯಾಂಕ್ ಎಂಬ ಹೆಸರಿನಲ್ಲಿ ಕಾರ್ಯಾಚರಣೆ ಪ್ರಾರಂಭ ಮಾಡಿ ಕೇವಲ ಮೂರು ವರ್ಷಗಳಾಗಿದ್ದವು. ಅಂದು ಗುಮಾಸ್ತೆಯೊಬ್ಬನ ಮಾಸಿಕ ವೇತನ ಕೇವಲ 15 ರೂ. ಮತ್ತು ಜವಾನನೊಬ್ಬನ ಸಂಬಳ 8 ರೂಪಾಯಿ! ತಡೆಯಿಲ್ಲದ ದುಡಿಮೆ, ಕಾರಣ ನೀಡದೆ ಉದ್ಯೋಗದಿಂದ ಉಚ್ಚಾಟನೆ ಮೊದಲಾದವುಗಳು ಸಾಮಾನ್ಯ ವಿಷಯಗಳಾಗಿದ್ದವು. ಮಂದಗತಿಯಲ್ಲಿ ಸಾಗಿದ ಬ್ಯಾಂಕ್ ಉದ್ಯೋಗಿಗಳ ಸಂಘಟನಾ ಹೋರಾಟ ಇಂಪೀರಿಯಲ್ ಬ್ಯಾಂಕ್ ಸಿಬ್ಬಂದಿಯ ಸತತ ಪ್ರಯತ್ನದ ಫಲವಾಗಿ ಮೊಟ್ಟಮೊದಲ ಉದ್ಯೋಗಿಗಳ ಸಂಘವೊಂದು 1946ರಲ್ಲಿ ಅಖಿಲ ಭಾರತೀಯ ಬ್ಯಾಂಕ್‌ಗಳು ಉದ್ಯೋಗಿಗಳ ಸಂಘ (ಎ.ಐ.ಬಿ.ಇ.ಎ)ವೆಂಬ ಹೆಸರಿನಲ್ಲಿ ಕಲ್ಕತ್ತೆಯಲ್ಲಿ ಪ್ರಾರಂಭವಾಯಿತು. ಈ ಮಹಾ ಸಂಘ ಸ್ಥಾಪಿತವಾದ ಕೂಡಲೇ ಬ್ಯಾಂಕ್ ಉದ್ಯೋಗಿಗಳು ಮುಷ್ಕರ ಹೂಡಿದರು. ಈ ಮುಷ್ಕರ ಕರಾಚಿ, ಪೆಷಾವರ್, ರಾವಲ್ಪಿಂಡಿ, ಲಾಹೋರು ಮುಂತಾದ ಸ್ಥಳಗಳಲ್ಲಿ ಬ್ಯಾಂಕಿಂಗ್ ಚಟುವಟಿಕೆಗಳನ್ನು ಸ್ಥಗಿತಗೊಳಿಸಿತು.

1952ರಲ್ಲಿ ಕೆಲವು ತಾತ್ವಿಕ ಭಿನ್ನಾಭಿಪ್ರಾಯಗಳಿಂದಾಗಿ, ಇಂಪೀರಿಯಲ್ ಬ್ಯಾಂಕ್ ಉದ್ಯೋಗಿಗಳು ಎ.ಐ.ಬಿ.ಇ.ಎ. ಯಿಂದ ಹೊರಬಂದರು. ಆ ಸಮಯದಲ್ಲಿ ಕಾಂಗ್ರೆಸ್ ಸಂಸ್ಥೆ ಅಖಿಲ ಭಾರತ ಬ್ಯಾಂಕ್ ಉದ್ಯೋಗಿಗಳ ಒಕ್ಕೂಟ (ಆಲ್ ಇಂಡಿಯ ಬ್ಯಾಂಕ್ ಎಂಪ್ಲಾಯೀಸ್ ಫೆಡರೇಷನ್) ಸ್ಥಾಪಿಸಿತು. ಈ ಸಂಘ ಬಹಳ ದಿನ ಬದುಕಲಿಲ್ಲ.

### ಕಾರ್ಮಿಕ ಜಾಗೃತಿ

ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯ 1955ರಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಆಗಿ ಪರಿವರ್ತಿತಗೊಂಡು ಕಾರ್ಯಾಚರಣೆ ನಡಸತೊಡಗಿತು. ಭಾರತದ ಬ್ಯಾಂಕಿಂಗ್ ಇತಿಹಾಸದಲ್ಲಿ ಇದೊಂದು ಚಿರಸ್ಮರಣೀಯ ತಿರುವು. ಇದು ಬ್ಯಾಂಕ್ ಉದ್ಯಮದ ರಾಷ್ಟ್ರೀಕರಣದ ಮೊದಲ ಕಂತು. ಬಡ್ಡಿ ವ್ಯವಹಾರದ ಸೀಮಿತ ಗುರಿಯಿಂದ ಶ್ರೀಸಾಮಾನ್ಯನ ಆರ್ಥಿಕ ಪರಿಸ್ಥಿತಿಯ ಬದಲಾವಣೆಯ ಉದಾತ್ತ ಗುರಿಯೆಡೆಗೆ ಮೊದಲ ಹೆಜ್ಜೆ. ಗ್ರಾಮಾಂತರ ಸಾಲದಿಂದ ಸಣ್ಣ ಕೈಗಾರಿಕೆಗೆ ವಿವಿಧ ಸ್ವರೂಪದ ಸಾಲಗಳು, ಕೃಷಿಕನ ನೂರೆಂಟು ಬೇಡಿಕೆಗಳನ್ನು ತೀರಿಸುವ ಸೌಲಭ್ಯಗಳ ತೀವ್ರ ಬದಲಾವಣೆ ಬ್ಯಾಂಕ್ ವ್ಯವಹಾರ ಸಮಾಜದ ಪ್ರತಿಷ್ಠೆಯ ಚಿಹ್ನೆಯಾಗಿದ್ದು ಕೇವಲ ಚಾಲ್ತಿಖಾತೆ ಮತ್ತು ಇಡುಗಂಟು ಸೌಲಭ್ಯಕ್ಕೆ ಸೀಮಿತವಾಗಿದ್ದು ಜನಸಾಮಾನ್ಯನ ಮನವೊಲಿಸಲು ಅವನ ಕಿಸೆಗೆಟುಕುವಂತಹ ಸೌಲಭ್ಯವೊದಗಿಸಲು ಬ್ಯಾಂಕ್‌ಗಳ ನಡುವೆ ತೀವ್ರ ಸ್ಪರ್ಧೆ ಆರಂಭವಾಯಿತು. ಇದು 60ರ ದಶಕದಲ್ಲಿ ಕಂಡುಬಂದ ಮಹತ್ತರ ಬದಲಾವಣೆ. ಈ ಬದಲಾವಣೆ ಬ್ಯಾಂಕ್ ಉದ್ಯಮ ಮತ್ತು ಉದ್ಯೋಗಿಗಳ ಸಂಬಂಧದಲ್ಲಿ ಅನೇಕ ಮಾರ್ಪಾಟುಗಳನ್ನು ತಂದಿತು. ಉದ್ಯೋಗಿಗಳು ತಮ್ಮ ಹಕ್ಕುಗಳ ಬಗ್ಗೆ ಹೆಚ್ಚು ಹೆಚ್ಚು ಜಾಗ್ರತರಾದರು. ಪ್ರತಿ ನಿಮಿಷದ ದುಡಿಮೆಗೂ ಬೆಲೆಯಿದೆಯೆಂದರಿತರು. ನಿಗದಿತ ದುಡಿಮೆ, ಉದ್ಯೋಗ ಭದ್ರತೆ, ಕಾರ್ಮಿಕ ಕಲ್ಯಾಣ ಯೋಜನೆಗಳು ಇವು ಪ್ರತಿಯೊಬ್ಬ ಸ್ವತಂತ್ರ ಪ್ರಜೆಯ ಹಕ್ಕು ಎಂಬ ಭಾವನೆ ಬಲವಾಯಿತು. ಈ ಒತ್ತಡ ಬಲವಾಗಿ ಕಾರ್ಮಿಕ ಹಕ್ಕುಗಳಿಗಾಗಿ 1960ರಲ್ಲಿ ಬ್ಯಾಂಕ್ ಉದ್ಯಮದ ಇತಿಹಾಸದಲ್ಲೇ ಅತಿ ದೀರ್ಘ ಕಾಲದ ಮುಷ್ಕರವನ್ನು ನಡೆಸಿದ ಖ್ಯಾತಿಗೆ ಭಾರತೀಯ ಸ್ಟೇಟ್ ಬ್ಯಾಂಕ್ ಉದ್ಯೋಗಿಗಳು ಕಾರಣರಾದರು. ಈ ಮುಷ್ಕರ ಸುಮಾರು 21 ದಿನಗಳ ವರೆಗೆ ನಡೆದು, ನ್ಯಾಯಾಧೀಶ ಶ್ರೀ ಕೆ. ಟಿ. ದೇಸಾಯಿಯವರ ಅಧ್ಯಕ್ಷತೆಯಲ್ಲಿ ಬ್ಯಾಂಕ್ ಉದ್ಯೋಗಿಗಳ ಬೇಡಿಕೆ

ಗಳ ಮತ್ತು ಕುಂದುಕೊರತೆಗಳ ಪರಿಶೀಲನೆ ನಡೆಸಲು ಸಮಿತಿಯೊಂದು ನೇಮಕವಾಯಿತು. ಈ ಮುಷ್ಕರ ಬ್ಯಾಂಕ್ ಉದ್ಯೋಗಿಗಳ ಸೇವಾ ನಿಯಮಗಳಲ್ಲಿ ಕ್ರಾಂತಿ ಕಾರಕ ಬದಲಾವಣೆಗಳನ್ನು ತಂದಿತು. ಅಲ್ಲಿಂದ ಆರಂಭವಾದ ಬ್ಯಾಂಕ್ ಉದ್ಯೋಗಿಗಳ ಸಂಘಟನೆಯು ಉನ್ನತಿ ದಿನ ದಿನಕ್ಕೂ ಆಗುತ್ತಿದೆ.

## ಮುಷ್ಕರದ ಫಲ

1960ರ ದೀರ್ಘ ಮುಷ್ಕರದ ನಂತರ ಬ್ಯಾಂಕು ಉದ್ಯೋಗಿಗಳ ಸಂಘಟನೆಗೆ ಒಂದು ಖಚಿತ ಸ್ವರೂಪ ದೊರೆಯಿತು. ಭಾರತೀಯ ಸಂಘಟನೆಯ ಇತಿಹಾಸವನ್ನು ಗುರುತಿಸುವಾಗ 1960-1975ರ ಬೆಳವಣಿಗೆಯನ್ನು ಸುವರ್ಣ ಯುಗವೆಂದು ಕರೆಯಬೇಕಾಗುತ್ತದೆ. ಬ್ಯಾಂಕ್ ಉದ್ಯೋಗಿಗಳ ಸಂಘಟನೆಗೂ ಇದೇ ಮಾತು ಅನ್ವಯಿಸುತ್ತದೆ. ಈ ಸಂಘಗಳು ಶೈಶವಾವಸ್ಥೆಯಲ್ಲಿದ್ದಾಗ ಇವುಗಳ ಧ್ಯೇಯ ಆಡಳಿತವರ್ಗದ ವಿರುದ್ಧ ತಮ್ಮ ಬೇಡಿಕೆಗಳ ಬಗ್ಗೆ ಹೋರಾಟ ನಡೆಸುವುದಷ್ಟೆ ಆಗಿದ್ದಿತು. ತಮ್ಮ ಕಾಲಮೇಲೆ ತಾವೇ ನಿಂತು ಚರ್ಚಿಸಿ ದ್ವಿಪಕ್ಷೀಯ ಒಪ್ಪಂದಕ್ಕೆ ಬರುವ ಶಕ್ತಿಯನ್ನು ಪಡೆಯಲು ಸುಮಾರು 6 ವರ್ಷಗಳು ಬೇಕಾದುವು. ಮಾಲಿಕ ವರ್ಗ ಮೂರನೆಯವರ ಪ್ರವೇಶ ವಿಲ್ಲದೆ ತಮ್ಮ ಉದ್ಯೋಗಿಗಳ ಬೇಡಿಕೆಗಳ ಬಗ್ಗೆ ಅವರೊಂದಿಗೆ ಚರ್ಚಿಸಿ ಉಭಯತ್ರರಿಗೂ ಸಮಾಧಾನ ತರುವಂತಹ ಒಪ್ಪಂದಗಳಿಗೆ ಬರುವುದು ಸಂಸ್ಥೆಯ ಆರೋಗ್ಯಕರ ಬೆಳವಣಿಗೆಯ ದೃಷ್ಟಿಯಿಂದ ಒಳಿತೆಂದು ಮನಗಂಡು ಉಭಯ ಪಕ್ಷಗಳ ಚರ್ಚೆಗೆ ಸಾಕಷ್ಟು ಅನುವು ಮಾಡಿಕೊಟ್ಟಿತು. 1964ರಲ್ಲಿ ಉಂಟಾದ ಆರ್ಥಿಕ ಬಿಕ್ಕಟ್ಟಿನಿಂದ ದಿನಬಳಕೆಯ ಸಾಮಗ್ರಿಗಳ ಬೆಲೆಯ ಯದ್ವಾತದ್ವ ಏರಿಕೆಯಾಗಿ ಕಾರ್ಮಿಕ ಜೀವನದ ವೆಚ್ಚದಲ್ಲಿ ಏರುಪೇರನ್ನು ಉಂಟುಮಾಡಿತು. ರಾಷ್ಟ್ರದ ಎಲ್ಲಾ ಸಂಘಗಳು ಉತ್ತಮ ಸಂಬಳ ಶ್ರೇಣಿಗಳಿಗಾಗಿ ಮುಷ್ಕರ ಹೂಡಿದವು. ಈ ಮುಷ್ಕರ ಎಚ್ಚೆತ್ತ ಎಲ್ಲಾ ಕಾರ್ಮಿಕರಂಗಗಳಿಗೂ ಹರಡಿತು. ಬ್ಯಾಂಕ್ ಉದ್ಯೋಗಿಗಳು ಹಿಂದೆ ಬೀಳಲಿಲ್ಲ. ಇದರ ಫಲವಾಗಿ ಮೊಟ್ಟಮೊದಲನೆಯ ದ್ವಿಪಕ್ಷೀಯ ಒಪ್ಪಂದಕ್ಕೆ ಬ್ಯಾಂಕ್ ಉದ್ಯೋಗಿಗಳ ಮತ್ತು ಮಾಲೀಕರ ನಡುವೆ 1966ರಲ್ಲಿ ಸಹಿ ಬಿದ್ದಿತು., ಈ ಒಪ್ಪಂದ ಬ್ಯಾಂಕ್ ಉದ್ಯೋಗಿಗಳ ಸಂಬಳ ಶ್ರೇಣಿಗಳಲ್ಲಿ ವಿವಿಧ ಭತ್ಯೆಗಳಲ್ಲಿ ಮತ್ತು ಕಲ್ಯಾಣ ಯೋಜನೆಗಳಲ್ಲಿ ಮಹತ್ತರ ಬದಲಾವಣೆಯನ್ನು ತಂದಿತು. ಕಾರ್ಮಿಕ ಕಲ್ಯಾಣ ಯೋಜನೆಗಳು, ವೈದ್ಯಕೀಯ ವೆಚ್ಚದ ಭರ್ತಿ, ರಜೆ ಪ್ರಯಾಣದ ವೆಚ್ಚ ಸೌಲಭ್ಯ ಮೊದಲಾದುವುಗಳಲ್ಲಿ ಸಾಕಷ್ಟು ಮಾರ್ಪಾಡುಗಳಾದವು.

## ಅಧಿಕಾರಿಗಳ ಸಂಘಟನೆ

ಸಿಬ್ಬಂದಿ ವರ್ಗದ ಸೇವಾ ನಿಯಮಗಳಲ್ಲಿ, ಸಂಬಳ ಶ್ರೇಣಿಗಳಲ್ಲಿ, ಕಲ್ಯಾಣ ಯೋಜನೆಗಳಲ್ಲಿ ಆದ ಮಹತ್ತರ ಬದಲಾವಣೆಗಳು ಪರೋಕ್ಷವಾಗಿ ಅಧಿಕಾರಿವರ್ಗಗಳ ದಿನ ನಿತ್ಯದ ಕಾರ್ಯದಲ್ಲಿ ಪರಿಣಾಮ ಬೀರತೊಡಗಿದುವು. ಬಿಡುವಿಲ್ಲದ ದುಡಿಮೆ, ಬ್ಯಾಂಕಿನ ಪ್ರತಿಯೊಂದು ಆಗುಹೋಗು ಕುರಿತ ನೇರ ಜವಾಬ್ದಾರಿ, ಈ ವರ್ಗ ಆಡಳಿತ ವರ್ಗದ ಅವಿಭಾಜ್ಯ ಅಂಗವೆಂಬ ಭ್ರಮೆ ನಿರಸನ, ಇವೇ ಮೊದಲಾದವುಗಳು ಅಧಿಕಾರಿವರ್ಗ ಸಂಘಟಿತವಾಗುವುದಕ್ಕೆ ಪ್ರೇರಣೆ ನೀಡಿದುವು. ಆ ಹೊತ್ತಿಗೆ ಉದ್ಯೋಗಿಗಳ ಸಂಘಟನೆಯ ಹೋರಾಟದಲ್ಲಿ ಸ್ವಯಂ ಪಾಲ್ಗೊಂಡಿದ್ದ ಅನೇಕ ಉದ್ಯೋಗಿಗಳು ಬಡ್ತಿ ಪಡೆದು ಅಧಿಕಾರಿಗಳಾಗಿದ್ದರು. ಸ್ವತಂತ್ರ ವಾತಾವರಣದಿಂದ ಬಂದ ಈ ವ್ಯಕ್ತಿಗಳಿಗೆ ಉಸಿರು ಕಟ್ಟುವ ವಾತಾವರಣ ನುಂಗಲಾರದ ತುತ್ತಾಗಿದ್ದಿತು. 'ದಂತದ ಗೋಪುರ'ದಲ್ಲಿ ವಾಸಿಸುತ್ತಿದ್ದ ಮಂದಿಗೆ ಧಿಡೀರನೆ ನೆಲದ ಮೇಲೆ ಇಳಿದ ಅನುಭವವಾಯಿತು. ಆಡಳಿತ ವರ್ಗದ ಅವಿಭಾಜ್ಯ ಅಂಗವೆಂಬ ಭ್ರಮೆಯಲ್ಲಿದ್ದ ಅಧಿಕಾರವರ್ಗ ಸಂಘಟಿತವಾಗುವುದಿರಲಿ, ಆ ಬಗ್ಗೆ ಯೋಚಿಸುವುದೂ ಅಂದಿನ ಕಾಲದಲ್ಲಿ ಕನಸಿನ ಮಾತಾಗಿದ್ದಿತು. ಈ ಪರಿಸ್ಥಿತಿಯಲ್ಲಿ ಮುಂದೆ ಒಂದು ವ್ಯವಸ್ಥಿತ ಸಂಘವನ್ನು ರಚಿಸಿಕೊಂಡು ಇಡೀ ರಾಷ್ಟ್ರಕ್ಕೆ ಏಕಮೇವಾದ್ವಿತೀಯವೆನಿಸಿದ ಅಖಿಲ ಭಾರತ ಬ್ಯಾಂಕ್ ಅಧಿಕಾರಿಗಳ ಸಂಘಗಳ ಒಕ್ಕೂಟವನ್ನು ಕಟ್ಟುವುದರಲ್ಲಿ ಯಶಸ್ವಿಯಾದ ಭಾರತೀಯ ಸ್ಟೇಟ್ ಬ್ಯಾಂಕ್ ಅಧಿಕಾರಿಗಳ ಸಂಘಟನೆಯ ಕಥೆ ಅತ್ಯಂತ ರೋಮಾಂಚಕಾರಿಯಾದದ್ದು.

## ಭಾರತೀಯ ಸ್ಟೇಟ್ ಬ್ಯಾಂಕ್ ಅಧಿಕಾರಿಗಳ ಸಂಘಟನೆ

ನೋವಿನ ಬವಣೆಯನ್ನುಂಡ ಅಧಿಕಾರಿ ವರ್ಗ ರಾತ್ರೋರಾತ್ರಿ ಸಂಘಟಿತರಾಗಲಿಲ್ಲ. ಸಿಬ್ಬಂದಿ ವರ್ಗಕ್ಕಿದ್ದ ಭಾರತೀಯ ಸಂಘಟನಾ ಕಾಯ್ದೆಯ ಅಥವಾ ಕೈಗಾರಿಕಾ ವ್ಯಾಜ್ಯ ಕಾಯ್ದೆಯ ರಕ್ಷಾಕವಚ ಅಧಿಕಾರಿ ವರ್ಗದವರಿಗಿರಲಿಲ್ಲ. ಮಾಲೀಕರ ಪ್ರೋತ್ಸಾಹ ಮತ್ತು ಸರಕಾರಿ ಮತ್ತು ಜನ ಸಾಮಾನ್ಯರ ಸಹಾನುಭೂತಿಯಂತೂ ದೂರವೇ ಉಳಿಯಿತು. ಹಾಗೂ ಧೈರ್ಯಮಾಡಿ ಸಂಘಟಿತರಾಗಲು ಕೆಲವು ಮಂದಿ ಮುಂದೆ ಬಂದರೆ ಅವರಿಗೆ ನಾಯಕತ್ವವನ್ನು ವಹಿಸಲು ಜನ ಹಿಂದೆಗೆಯುತ್ತಿದ್ದರು. ಹೀಗೆ ಮಂದಗತಿಯಲ್ಲಿ ಸಾಗಿದ ಬೆಳವಣಿಗೆ ಭಾರತೀಯ ಸ್ಟೇಟ್ ಬ್ಯಾಂಕ್‌ಗಳ ವಿವಿಧ ವೃತ್ತಗಳು ತಮ್ಮವೇ ಆದ ಕೂಟಗಳನ್ನು ರಚಿಸಿಕೊಂಡು 1965ರ ಸೆಪ್ಟೆಂಬರ್ ಹೊತ್ತಿಗೆ ಅಖಿಲ ಭಾರತೀಯ ಸ್ಟೇಟ್ ಬ್ಯಾಂಕ್ ಅಧಿಕಾರಿಗಳ ಒಕ್ಕೂಟವನ್ನು ಸ್ಥಾಪಿಸುವುದರಲ್ಲಿ ಪರಿಣಾಮ ಹೊಂದಿತು. ಒಕ್ಕೂಟ ಸ್ಥಾಪಿತವಾದ ಕೂಡಲೇ ಅಧಿಕಾರಿ ವರ್ಗ 1966ರಲ್ಲಿ ತಮ್ಮ ಬೇಡಿಕೆಗಳ ಪತ್ರವನ್ನು ಆಡಳಿತ ವರ್ಗಕ್ಕೆ ಸಲ್ಲಿಸಿತು. ಈ ಬೇಡಿಕೆ ಪತ್ರದಲ್ಲಿ ಕೇವಲ ಸಂಬಳದ ಬಗ್ಗೆ ಮಾತ್ರವಲ್ಲದೆ ಸಾಂದರ್ಭಿಕ

ರಜೆ, ಕುಟುಂಬದವರಿಗೆ ವೈದ್ಯಕೀಯ ಸೌಲಭ್ಯ, ಬೋನಸ್ ಮುಂತಾದ ಸಾಮಾನ್ಯ ಬೇಡಿಕೆಗಳೂ ಇದ್ದುವು ಎಂದರೆ ಅಂದಿನ ಸೇವಾನಿಯಮದ ಪರಿಸ್ಥಿತಿಯ ಕಲ್ಪನೆ ಬರುತ್ತದೆ. ಇದೇ ಸಮಯದಲ್ಲಿ ಖ್ಯಾತ ಕಾರ್ಮಿಕ ಸಂಘಟನಾ ತಜ್ಞ ಶ್ರೀ ಎಸ್. ಆರ್. ಮೋಹನ್‌ದಾಸ್‌ರವರು ಅಂದಿನ ಸೇವಾಸ್ಥಿತಿಯನ್ನು ವರ್ಣಿಸಿ ಬರೆದ ಪ್ರಬುದ್ಧ ಲೇಖನವೊಂದು ಜನರ ಗಮನ ಸೆಳೆಯುವುದರಲ್ಲಿ ಸಹಾಯಕವಾಯಿತು. ಇದರ ಫಲವಾಗಿ 1966ರ ನವೆಂಬರ್ ತಿಂಗಳಲ್ಲಿ ಪ್ರಥಮ ದ್ವಿಪಕ್ಷೀಯ ಮಾತುಕತೆಯಲ್ಲಿ ಕೆಲವೊಂದು ಸಣ್ಣ ಬೇಡಿಕೆಗಳನ್ನು ಆಡಳಿತವರ್ಗ ಈಡೇರಿಸಲು ಒಪ್ಪಿಗೆ ನೀಡಿತು. ಈ ಅಲ್ಪ ಯಶಸ್ಸಿನಿಂದ ಆರಂಭವಾದ ದ್ವಿಪಕ್ಷೀಯ ಮಾತುಕತೆ ಮತ್ತು ಆಡಳಿತವರ್ಗದ ಮತ್ತು ಅಧಿಕಾರಿ ವರ್ಗದ ನಡುವೆ ಬೆಳೆದ ಸಂಬಂಧ 1969ರ ಹೊತ್ತಿಗೆ ಅಧಿಕಾರಿಗಳಿಗೆ ಸಾಕಷ್ಟು ಬಲವನ್ನು ಮತ್ತು ಮನಸ್ಥೈರ್ಯವನ್ನು ತಂದಿತು.

### ನಿಲುವಿನಲ್ಲಿ ಬದಲಾವಣೆ

ತಮ್ಮ ಸಂಘಟನಾ ಹಕ್ಕಿಗೆ ಮತ್ತು ನ್ಯಾಯಬದ್ಧ ಬೇಡಿಕೆಗಳಿಗೆ ಮನ್ನಣೆ ಮನ್ನಣೆಗಾಗಿ ನಡೆದ ಸುದೀರ್ಘ ಹೋರಾಟದಿಂದ ದಕ್ಕದಿರುವುದನ್ನು ಮನಗಂಡ ಅಧಿಕಾರಿಗಳ ಒಕ್ಕೂಟ 1969 ಮಾರ್ಚ್‌ನಲ್ಲಿ ಮುಷ್ಕರದ ನೋಟೀಸನ್ನು ನೀಡಿತು. ಇದಕ್ಕುತ್ತರವಾಗಿ ಆಡಳಿತವರ್ಗ ನಾಲ್ಕು ಮಂದಿ ಅಧಿಕಾರಿಗಳನ್ನು ಕೆಲಸದಿಂದ ಉಚ್ಚಾಟನೆ ಮಾಡಿತು. ಅಧಿಕಾರಿಗಳು ಎದೆಗುಂದಲಿಲ್ಲ. ವಿಶ್ವದ ಅಧಿಕಾರಿ ವರ್ಗದ ಸಂಘಟನೆಯ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡಬಹುದಾದಂತಹ ಘಟನೆಯನ್ನು ಸೃಷ್ಟಿಸುವೆವೆಂಬ ಅರಿವು ಬಹುಶಃ ಆಗ ಅವರಿಗೆ ಇದ್ದಿರಲಿಲ್ಲ. 'ಮಾಡು ಅಥವಾ ಮಡಿ' ಎಂಬ ವಾಕ್ಯವನ್ನು ಅವರು ದೃಢವಾಗಿ ನಂಬಿದ್ದರು. ಪರಿಣಾಮ : ವಿಶ್ವದಲ್ಲೆ ಅಧಿಕಾರಿ ವರ್ಗದ ಮೊಟ್ಟಮೊದಲ ಮುಷ್ಕರ. ಅದು 16 ದಿನಗಳ ಸಾವು-ಬದುಕಿನ ದೀರ್ಘ ಹೋರಾಟ; ತಪಸ್ಸು. ಈ ಹೋರಾಟದಲ್ಲಿ ಪಾಲ್ಗೊಂಡ ಎಲ್ಲ ಧೀರರಿಗೂ ಇಂದು ಉದ್ಯಮಕ್ಕೆ ಕಾಲಿಡುವುದಕ್ಕೆ ಮುಂಚೆ ಎಲ್ಲ ಅಧಿಕಾರಿಯೂ ಮನಸ್ಸಿನಲ್ಲಿಯೇ ನಮನ ಮಾಡಬೇಕಾಗುತ್ತದೆ. ಇಂದು ಅಧಿಕಾರಿ ವರ್ಗ ಆತ್ಮಾಭಿಮಾನ, ಆಡಳಿತವರ್ಗದವರ ಗೌರವ ಸಂಪಾದಿಸುವಂತಾಗಿದ್ದರೆ ಅದಕ್ಕೆ ಕಾರಣ ಅಂದಿನ ಅಧಿಕಾರಿಗಳ ತ್ಯಾಗ ಮತ್ತು ಹೋರಾಟದಲ್ಲವರಿಟ್ಟಿದ್ದ ಅಚಲವಾದ ನಂಬಿಕೆ.

ಈ ಮುಷ್ಕರದ ಯಶಸ್ಸು ಬ್ಯಾಂಕು ಉದ್ಯಮದ ಅಧಿಕಾರಿ ವರ್ಗದ ಸಂಘಟನೆಯ ಸ್ವರೂಪವನ್ನು ಬದಲಾಯಿಸಿದೆ. ಅಲ್ಲದೆ ಅನ್ಯ ಉದ್ಯಮಗಳಲ್ಲಿನ ಅಧಿಕಾರಿ ವರ್ಗ ಸಂಘಟಿತವಾಗುವುದಕ್ಕೆ ಸ್ಫೂರ್ತಿಯನ್ನು ನೀಡಿತು. 1969ರಲ್ಲಿ 14 ಪ್ರಮುಖ ಖಾಸಗಿ ಬ್ಯಾಂಕುಗಳು ರಾಷ್ಟ್ರೀಕೃತವಾದುವು. 1970ರಲ್ಲಿ ಈ ಎಲ್ಲಾ ಬ್ಯಾಂಕುಗಳ ಮಾಲೀಕವರ್ಗಗಳು ತಮ್ಮ ತಮ್ಮ ಅಧಿಕಾರಿಗಳ ಸಂಘಗಳೊಡನೆ ಪ್ರತ್ಯೇಕ ಒಪ್ಪಂದಗಳನ್ನು ಮಾಡಿಕೊಂಡುವು. ಈ ಒಪ್ಪಂದಗಳ ನಡುವೆ ಇದ್ದ ತಾರತಮ್ಯವನ್ನೇ ಕಾರಣವಾಗಿಟ್ಟುಕೊಂಡು ಭಾರತ ಸರ್ಕಾರ 1973ರಲ್ಲಿ ಶ್ರೀ ವಿ. ಆರ್. ಪಿಳ್ಳೆಯವರ ನೇತೃತ್ವದಲ್ಲಿ 5 ಮಂದಿ ಪರಿಣತರ ಸಮಿತಿಯೊಂದನ್ನು ನೇಮಿಸಿ ಎಲ್ಲಾ ಬ್ಯಾಂಕುಗಳ ಅಧಿಕಾರಿಗಳಿಗೂ ಸಾಮಾನ್ಯ ಸೇವಾನಿಯಮವನ್ನು ರೂಪಿಸಲು ಆಜ್ಞಾಪಿಸಿತು. 14 ರಾಷ್ಟ್ರೀಕೃತ ಬ್ಯಾಂಕ್ ಅಧಿಕಾರಿಗಳ ಸೇವಾನಿಯಮಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸೂಕ್ತ ಮಾರ್ಪಾಡುಗಳೊಡನೆ ವಿವರವಾದ ವರದಿಯನ್ನು ತಯಾರಿಸುವುದೇ ಈ ಸಮಿತಿಯ ಉದ್ದೇಶವಾಗಿದ್ದಿತು. ಭಾರತೀಯ ಸ್ಟೇಟ್ ಬ್ಯಾಂಕನ್ನು ಈ ಸಮಿತಿಯ ಕಾರ್ಯವ್ಯಾಪ್ತಿಯ ಪರಿಧಿಯಿಂದ ಹೊರಗಿಡಲಾಯಿತು. ಸಿಂಡಿಕೇಟ್ ಬ್ಯಾಂಕ್ ಅಧಿಕಾರಿಗಳ ಸಂಘ, ಪಂಜಾಬ್ ನ್ಯಾಷನಲ್ ಬ್ಯಾಂಕ್ ಸಂಘ, ಅಖಿಲ ಭಾರತ ಬ್ಯಾಂಕ್ ಅಧಿಕಾರಿಗಳ ಸಂಘಗಳ ಒಕ್ಕೂಟ ಮೊದಲಾದ ಸಂಘಗಳು ಈ ಸಮಿತಿಯ ಮುಂದೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದುವು. ಭಾರತೀಯ ಸ್ಟೇಟ್ ಬ್ಯಾಂಕ್‌ಗಳ ಅಥವಾ ಸಹ ಬ್ಯಾಂಕ್‌ಗಳ ಕೂಟಗಳು ಈ ಸಮಿತಿಯ ಮುಂದೆ ಕಾಣಿಸಿಕೊಳ್ಳಲಿಲ್ಲ. ಸಮಿತಿಯು ವ್ಯಾಪಕ ವರದಿಯೊಂದನ್ನು ರಚಿಸಿ 1974ರಲ್ಲಿ ಸರ್ಕಾರದ ಮುಂದಿಟ್ಟಿತು.

### ತುರ್ತು ಪರಿಸ್ಥಿತಿ ಮತ್ತು ಪಿಳ್ಳೆ ಸಮಿತಿ ವರದಿ

1975ರಲ್ಲಿ ರಾಷ್ಟ್ರಕ್ಕೊದಗಿದ ತುರ್ತು ಪರಿಸ್ಥಿತಿ ದೇಶದ ಕಾರ್ಮಿಕರ ಸಂಘಟನೆಯ ಎಲ್ಲಾ ಹಕ್ಕುಗಳಿಗೂ ಮುಟ್ಟುಗೋಲು ಹಾಕಿತು. ಸರ್ಕಾರದ ಕಾರ್ಮಿಕ ವಿರೋಧಿ ಧೋರಣೆ ಎಲ್ಲಾ ಸಂಘಗಳಿಗೂ ನುಂಗಲಾರದ ತುತ್ತಾಯಿತು. ತುಟ್ಟಿಭತ್ಯೆಯ ಮತ್ತು ಹೆಚ್ಚುವರಿ ಸಂಬಳದ ಅರ್ಧದಷ್ಟು ಕಡ್ಡಾಯ ಠೇವಣಿ, ಲಾಭಾಂಶದ ಮೇಲೆ ಗರಿಷ್ಠ ಮಿತಿ, ಸಿಬ್ಬಂದಿ ನೇಮಕದಲ್ಲಿ ಕಡಿತ ಇವೇ ಮೊದಲಾದ ಕಾರ್ಮಿಕ ವಿರೋಧಿ ಕ್ರಮಗಳು ಕಾರ್ಮಿಕರು ದೀರ್ಘ ಹೋರಾಟದಲ್ಲಿ ಗಳಿಸಿದ್ದನ್ನು "ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ"ವೆನ್ನುವಂತೆ ಒಂದೇ ಏಟಿಗೆ ಧ್ವಂಸ ಮಾಡಿದುವು. ಬಹುಶಃ ಮತ್ತೊಮ್ಮೆ ಕಾರ್ಮಿಕ ಸಂಘಗಳು ಆಗ ಕಳೆದುಕೊಂಡಿದ್ದನ್ನು ಮತ್ತೆ ಗಳಿಸಬೇಕಾದರೆ ಇನ್ನೂ ಹಲವಾರು ವರ್ಷಗಳೇ ಬೇಕಾಗಬಹುದು. ಈ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಪಿಳ್ಳೆ ಸಮಿತಿಯ ವರದಿ ತಾತ್ಕಾಲಿಕವಾಗಿ ಸರ್ಕಾರದ ಶೀತಲ ಆಗಾರವನ್ನು ಸೇರಿತು. 1976ರಲ್ಲಿ ಮತ್ತೆ ಸರ್ಕಾರ ಬ್ಯಾಂಕ್ ಅಧಿಕಾರಿಗಳಲ್ಲಿ ವರದಿಯ ಬಗ್ಗೆ ಇದ್ದ ಅಸಮಾಧಾನವನ್ನು ಗಮನಿಸಿ ಪರಿಶೀಲನಾ ಸಮಿತಿಯೊಂದನ್ನು ರಚಿಸಿ ಈ ವರದಿಯನ್ನು ಜಾರಿಗೆ ತರಲು ಅಭಿಪ್ರಾಯವನ್ನು ಅಪೇಕ್ಷಿಸಿತು. ಈ ಸಮಿತಿಯು ಸೂಕ್ತ ಮಾರ್ಪಾಡುಗಳೊಡನೆ ಜಾರಿಗೆ ಅನುವಾಗುವಂತೆ

ಪರಿಷ್ಕೃತ ವರದಿಯೊಂದನ್ನು ಸರ್ಕಾರಕ್ಕೊಪ್ಪಿಸಿತು. ಸರ್ಕಾರ ಏಕಪಕ್ಷೀಯ ತೀರ್ಮಾನ ಕೈಗೊಂಡು ಈ ವರದಿಯನ್ನು ಬ್ಯಾಂಕ್ ಅಧಿಕಾರಿಗಳ ನೂತನ ಸೇವಾನಿಯಮ ಮತ್ತು ಸಂಬಳ ಶ್ರೇಣಿಗಳೆಂದು ಅಂಗೀಕರಿಸಿ ಜಾರಿಗೆ ತರಲು ಮುಂದಾಯಿತು. ದ್ವಿಪಕ್ಷ ಮಾತುಕತೆಗೆಂದು ತಮ್ಮದೇ ಆದ ಬೇಡಿಕೆ ಪತ್ರವನ್ನು ಸಿದ್ಧಪಡಿಸಿಕೊಂಡು ಕುಳಿತಿದ್ದ ಬ್ಯಾಂಕ್ ಅಧಿಕಾರಿಗಳಿಗೆ ದಿಗ್ಭ್ರಮೆಯಾಯಿತು. ಮತ್ತೆ ಹೋರಾಟ ಆರಂಭ. 1977ರಿಂದ 1979ರ ವರೆಗಿನ ದೀರ್ಘಕಾಲದ ಹೋರಾಟ, ಅಸ್ಥಿರ ರಾಜಕೀಯ ಪರಿಸ್ಥಿತಿ, ಆಳರಸರ ಕಾರ್ಮಿಕ ವಿರೋಧಿ ಧೋರಣೆಗಳಿಂದಾಗಿ ಅಖಿಲ ಬ್ಯಾಂಕ್ ಅಧಿಕಾರಿಗಳ ಸಂಘಗಳ ಒಕ್ಕೂಟ ಪಿಳ್ಳೆಯವರ ವರದಿಯ ಮೇಲೆ ತಮ್ಮ ಅಂಕಿತವನ್ನೊತ್ತಬೇಕಾಯಿತು. ಈ ಮಧ್ಯೆ ಸರಕಾರ ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಸಹ ಬ್ಯಾಂಕ್‌ಗಳನ್ನು ಸಹ ಪಿಳ್ಳೆ ವರದಿಯ ವ್ಯಾಪ್ತಿಗೊಳಪಡಿಸಿ, ಸರಿಪಡಿಸಲಾಗದ ದ್ರೋಹವನ್ನೆಸಗಿತು. ಸಮಿತಿಯ ನೇಮಕಾತಿಯ ಪೂರ್ವದಲ್ಲಿಯೇ ಈ ಬ್ಯಾಂಕುಗಳನ್ನು ಸಮಿತಿಯ ಕಾರ್ಯವ್ಯಾಪ್ತಿಯ ಹೊರಗಿಟ್ಟಿದ್ದನ್ನು ಬಹಿರಂಗಪಡಿಸಿದ್ದರೂ, ಸಮಿತಿಯ ಕಾರ್ಯಾಚರಣೆಯ ಕಾಲದಲ್ಲಿ ಯಾವ ಸೂಚನೆಯನ್ನು ನೀಡದೆಯೂ ಮತ್ತು ಸಮಿತಿಯ ಮುಂದೆ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಲೀ ಅಥವಾ ಮನವಿಯನ್ನು ಸಲ್ಲಿಸಲಾಗಲೀ ಆಹ್ವಾನಿಸದೆಯೂ ಸರ್ಕಾರ ಒಮ್ಮೆಗೇ ಪಿಳ್ಳೆ ಸಮಿತಿಯ ವರದಿಯನ್ನು ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಜಾರಿಗೆ ತಂದದ್ದರಿಂದ ಬ್ಯಾಂಕ್ ಅಧಿಕಾರಿ ವರ್ಗದ ಸೇವಾ ನಿಯಮಗಳಿಗೆ ಸರಿಪಡಿಸಲಾಗದ ಪೆಟ್ಟು ಬಿದ್ದಂತಾಯಿತು. ಇದು ಅನ್ಯಾಯ.

### ಮುಷ್ಕರ ನಿಷೇಧ

ಈ ಅನ್ಯಾಯವನ್ನು ಮರೆಯುವಷ್ಟರಲ್ಲೇ ಮತ್ತೊಂದು ಆಘಾತವಾಯಿತು. ಸರ್ಕಾರದ ಕಾರ್ಮಿಕ ವಿರೋಧಿ ಕ್ರಮ ಮುಂದುವರಿದು ಮತ್ತೊಮ್ಮೆ ಕಾರ್ಮಿಕ ಹಕ್ಕುಗಳ ಹರಣವಾಯಿತು. ದೇಶದಲ್ಲಿ ಕಾರ್ಮಿಕರು ನಡೆಸುವ ಮುಷ್ಕರದ ಮೇಲೆ ಹತೋಟಿಯಿಡುವ ಪ್ರಯುಕ್ತ ಕರಾಳ ಶಾಸನವೊಂದನ್ನು ಕೇಂದ್ರಸರ್ಕಾರ ಜಾರಿಗೆ ತಂದಿತು. ಬ್ಯಾಂಕ್ ಉದ್ಯಮವೂ ಸೇರಿದಂತೆ 16 ಪ್ರಮುಖ ಉದ್ದಿಮೆಗಳನ್ನು ಅತ್ಯಾವಶ್ಯಕ ಉದ್ದಿಮೆಗಳೆಂದು ಘೋಷಿಸಲಾಯಿತು. ಈ ಉದ್ದಿಮೆಗಳಲ್ಲಿ ಮುಷ್ಕರವನ್ನು ನಿಷೇಧಿಸಲಾಯಿತು. ನಿಯಮ ತಪ್ಪಿದಲ್ಲಿ ಜುಲ್ಮಾನೆ, ಕಾರಾಗೃಹವಾಸ. ಈ ಕರಾಳ ಶಾಸನದ ವಿರುದ್ಧ ದೇಶಾದ್ಯಂತ ಚಳವಳಿ ಪ್ರತಿಭಟನೆಗಳಾದುವು. 1982ರ ಜನವರಿಯ 19ರಂದು ಇಡೀ ಕಾರ್ಮಿಕ ವರ್ಗದವರೂ ಮುಷ್ಕರ ಹೂಡಿದರು.

### ಮಣಿಯದ ಹಟ

1979ರಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನ ಅಧಿಕಾರಿಗಳ ಮೇಲೆ ಪಿಳ್ಳೆಯ ವರದಿಯನ್ನು ಬಲವಂತವಾಗಿ ಹೇರಿದ ಮೇಲೆ ಬ್ಯಾಂಕಿನ ಬಡ್ತಿ ನೀತಿಯಲ್ಲಿ ಏರುಪೇರಾಯಿತು. ಅಧಿಕಾರಿಗಳ ಕುಂದುಕೊರತೆ ಮತ್ತು ಎಲ್ಲ ಬೇಡಿಕೆಗಳ ಬಗ್ಗೆ ಆಡಳಿತವರ್ಗದ ಶೀತಲ ಪ್ರತಿಕ್ರಿಯೆ. ಪರಿಣಾಮ : ಮತ್ತೊಮ್ಮೆ ಬಲಾಬಲಗಳ ಪ್ರದರ್ಶನ. ಈಗಂತೂ ತಮ್ಮ ಎಲ್ಲ ಸಿಟ್ಟನ್ನು ಎತ್ತಿ ತೋರಿಸುವವೋ ಎಂಬಂತೆ ಇಡೀ ಅಧಿಕಾರಿವರ್ಗದವರು ಮುಷ್ಕರ ಹೂಡಿದರು. ಶೇಕಡಾ ನೂರಕ್ಕೆ ನೂರರಷ್ಟು ಯಶಸ್ಸಾಯಿತು. ಕನಸಿನ ಪ್ರಪಂಚದಲ್ಲಿ ವಿಹರಿಸುತ್ತಿದ್ದ ಆಡಳಿತವರ್ಗಕ್ಕೆ ಪಕ್ಕನೆ ಭೂಮಿಗಿಳಿದ ಅನುಭವವಾಯಿತು. ಮುಷ್ಕರ ನಡೆದ 30 ದಿನಗಳ ಒಳಗೆ ಅಧಿಕಾರಿಗಳ ಎಲ್ಲಾ ಬೇಡಿಕೆಗಳ ಮನ್ನಣೆಯ ಒಪ್ಪಂದವಾಯಿತು. ಈ ಯಶಸ್ಸು ಇಡೀ ಕಾರ್ಮಿಕ ಜಗತ್ತಿಗೆ ಸ್ಫೂರ್ತಿ. ಯಾವ ಶಾಸನವೂ ಕಾರ್ಮಿಕರ ಹಕ್ಕನ್ನು ಮಣಿಸಲಾರದೆಂಬ ಸತ್ಯದ ನಿರೂಪಣೆ. ಈ ಖ್ಯಾತಿ ಮತ್ತೊಮ್ಮೆ ಭಾರತೀಯ ಸ್ಟೇಟ್ ಬ್ಯಾಂಕಿನ ಅಧಿಕಾರಿ ವರ್ಗದ ಪಾಲು. ಈ ನಡುವೆ ಭಾರತೀಯ ಬ್ಯಾಂಕ್‌ಗಳ ಸಂಘ (ಐ.ಬಿ.ಎ) ಮತ್ತು ಉದ್ಯೋಗಿ ಸಂಘಗಳ ನಡುವೆ ಯಾಂತ್ರೀಕರಣದ ಬಗ್ಗೆ ಆದ ಒಪ್ಪಂದದ ಪ್ರತಿಫಲವಾಗಿ ಬಹಳ ದಿನಗಳಿಂದಲೂ ಬಾಕಿ ಉಳಿದಿದ್ದ ಬೇಡಿಕೆಗಳ ಅಂಗೀಕಾರವಾಯಿತು.

### ಭವಿಷ್ಯ

ಈಗ ಉದ್ಯೋಗಿಗಳು 4ನೆಯ ದ್ವಿಪಕ್ಷೀಯ ಒಪ್ಪಂದಕ್ಕೆ ಎದುರು ನೋಡುತ್ತಿದ್ದಾರೆ. ಅಧಿಕಾರಿಗಳು ಭಾರತೀಯ ಬ್ಯಾಂಕ್‌ಗಳ ಸಂಘಕ್ಕೆ ಮಂಡಿಸಿರುವ ಬೇಡಿಕೆ ಪತ್ರದ ಬಗ್ಗೆ ಆಶಾಭಾವನೆಯನ್ನು ತಳೆದಿದ್ದಾರೆ. 1984 ಬ್ಯಾಂಕು ಉದ್ಯೋಗಿಗಳ ಭವಿಷ್ಯದ ನಿರ್ಣಯದ ವರ್ಷವೆನಿಸುವ ಸಾಧ್ಯತೆಯಿದೆ.

ಇಂದಿನ ಬ್ಯಾಂಕ್ ಉದ್ಯೋಗಿಗಳ ಸಂಘಸಂಸ್ಥೆಗಳ ಬಗ್ಗೆ ಒಂದು ಮಾತು. ಇಡೀ ರಾಷ್ಟ್ರಕ್ಕೆ ಭಾರತೀಯ ಬ್ಯಾಂಕ್‌ಗಳ ಸಂಘದೊಡನೆ ಮಾತುಕತೆ ನಡೆಸಲು ಅಧಿಕೃತ ಮಾನ್ಯತೆ ಪಡೆದ ಸಂಘಗಳು ಕೇವಲ 3. ಉದ್ಯೋಗಿಗಳ ಪರವಾಗಿ ರಾಷ್ಟ್ರದ ಬೃಹತ್ ಸಂಘಗಳಲ್ಲಿ ಒಂದಾದ ಅಖಿಲ ಭಾರತೀಯ ಬ್ಯಾಂಕ್ ಉದ್ಯೋಗಿಗಳ ಸಂಘ (ಎ.ಐ.ಬಿ.ಇ.ಎ.) ಬ್ಯಾಂಕು ಉದ್ಯೋಗಿಗಳ ರಾಷ್ಟ್ರೀಯ ಸಹಕೂಟ (ಎನ್.ಸಿ.ಬಿ.ಇ.) ಮತ್ತು ಅಧಿಕಾರಿಗಳ ಪರವಾಗಿ ಏಕಮೇವಾದ್ವಿತೀಯವೆನಿಸಿರುವ ಅಖಿಲ ಭಾರತ ಬ್ಯಾಂಕ್ ಅಧಿಕಾರಿಗಳ ಸಂಘಗಳ ಒಕ್ಕೂಟ (ಎ.ಐ.ಸಿ.ಓ.ಬಿ.ಓ.ಓ.). ಇವುಗಳಲ್ಲದೆ ಕೆಲವು ಸಣ್ಣಪುಟ್ಟ ಸಂಘಗಳು ನಮಗೆ ಮನ್ನಣೆ ನೀಡಲು ಸಾಕಷ್ಟು ಸದಸ್ಯರುಗಳಿದ್ದಾರೆಂದು ಕೂಗುತ್ತಲೇ ಇವೆ. ಈ ಸಂಘಗಳು ಆಟಕ್ಕುಂಟು ಲೆಕ್ಕಕ್ಕಿಲ್ಲವೆಂಬಂತೆ. ಹೆಚ್ಚೆಂದರೆ ಈ ಸಂಘಗಳ ಒಪ್ಪಂದಕ್ಕೆ ಸೂಚಿತ ಚುಕ್ಕೆಯ ಮೇಲೆ ತಮ್ಮ ಅಂಕಿತವನ್ನಿಡುವ ರಿಯಾಯಿತಿ ಅಷ್ಟೆ. ಇಂದು

ಸಂಘಟನೆಯ ಬೆಳವಣಿಗೆ, ವೈವಿಧ್ಯಮಯ ಸಂಘಟನೆ ಇಲ್ಲದ ರಂಗವೇ ಇಲ್ಲ. ಕಾರ್ಮಿಕರ, ವಿದ್ಯಾರ್ಥಿಗಳ, ಕೃಷಿಕರ, ರೈತರೇ ಮೊದಲಾದವರ ಸಂಘಟನೆಗಳು ಸಾಮಾನ್ಯ. ಗ್ರಾಹಕರ ಸಂಘಟನೆಯೂ ಉಂಟು. ಅಷ್ಟೇಕೆ, ಕಾರ್ಮಿಕರ ವಿರುದ್ಧ ಮಾಲೀಕರು ಸಂಘಟಿತರಾಗುತ್ತಿದ್ದಾರೆ. ಅಂತಹ ಸಂಘಟನೆಗಳಲ್ಲಿ ನಮ್ಮ ಭಾರತೀಯ ಬ್ಯಾಂಕುಗಳ ಸಂಘ (ಐ.ಬಿ.ಎ) ಒಂದು. ಉದ್ಯೋಗಿಗಳು ಅವರ ಮುಂದೆ ಬೇಡಿಕೆ ಪತ್ರವನ್ನಿಡುವಂತೆ ಇವರೂ ಉದ್ಯೋಗಿಗಳ ಮುಂದೆ ತಮ್ಮ ಬೇಡಿಕೆ ಪತ್ರವನ್ನಿಡುತ್ತಾರೆ. ಎರಡು ಪಕ್ಷಗಳ ನಡುವೆ ಚೌಕಾಸಿ ನಡೆದು ಕೊನೆಗೆ ಉಭಯತ್ರರಿಗೂ ಸಮಾಧಾನ ನೀಡುವಂತಹ ಒಪ್ಪಂದಕ್ಕೆ ಬರುತ್ತಾರೆ. ಬ್ಯಾಂಕ್ ಉದ್ಯೋಗಿಗಳಿಗೆ ಇರುವ ದೊಡ್ಡ ಅಸಮಾಧಾನವೆಂದರೆ ಭಾರತೀಯ ಬ್ಯಾಂಕ್ ಸಂಘಕ್ಕೆ ಸ್ವಯಂ ಅಧಿಕಾರವಿಲ್ಲದಿರುವುದು. ದುರದೃಷ್ಟವಶಾತ್ ಉದ್ಯೋಗಿಗಳ ಬೇಡಿಕೆಗಳ ಸ್ವಯಂ ತೀರ್ಮಾನ ನೀಡಬೇಕಾದಂತಹ ಭಾರತೀಯ ಬ್ಯಾಂಕ್ ಸಂಘ ಇಂದು ಕೇವಲ ಅಂಚೆ ಕಛೇರಿಯ ಕೆಲಸವನ್ನು ನಿರ್ವಹಿಸುತ್ತಿರುವುದು. ಈ ಸಂಘ ಚರ್ಚೆಯಿಂದಾದ ತೀರ್ಮಾನವನ್ನು ಸರ್ಕಾರಕ್ಕೆ ಕಳುಹಿಸಿಕೊಡುವುದು. ಅಲ್ಲಿ ಬ್ಯಾಂಕಿಂಗ್ ವಿಭಾಗದಲ್ಲಿ ಅನಗತ್ಯ ವಿಳಂಬವಾಗುತ್ತದೆ. ಈ ಸಂಘಕ್ಕೆ ಸಾಕಷ್ಟು ಅಧಿಕಾರ ಕೊಡದೆ ತಮ್ಮ ಬೇಡಿಕೆಗಳು ಬೇಗನೆ ಈಡೇರಲಾರವೆಂದು ಉದ್ಯೋಗಿಗಳು ಪ್ರತಿಯೊಂದು ಸಂದರ್ಭದಲ್ಲಿಯೂ ತಮ್ಮ ಅಸಮಾಧಾನವನ್ನು ಪ್ರಕಟಿಸುತ್ತ ಬಂದಿದ್ದಾರೆ.

ಆಧುನಿಕ ಬ್ಯಾಂಕಿಂಗ್ ಉದ್ಯಮ ವೈವಿಧ್ಯಮಯ. ಗ್ರಾಹಕರ ಬೇಡಿಕೆಗಳ ಮತ್ತು ಸೇವಾ ನಿರೀಕ್ಷೆ ಅಪಾರ. ಮಾಲೀಕರು ಮತ್ತು ಉದ್ಯೋಗಸ್ಥರ ನಡುವೆ ಆಗಾಗ ಘರ್ಷಣೆ ಅನಿವಾರ್ಯ. 1956ರಲ್ಲಿ ಪ್ರತಿ 98,000 ಜನಸಂಖ್ಯೆಗೆ ಒಂದರಂತೆ ಇದ್ದ ವಾಣಿಜ್ಯ ಬ್ಯಾಂಕುಗಳ ಶಾಖೆಗಳು ಪ್ರತಿ 17,500 ಮಂದಿಗೆ ಒಂದರಂತೆ ಇವೆ. ರಾಷ್ಟ್ರದಲ್ಲಿಂದು ಸುಮಾರು 40,000ಕ್ಕೂ ಮಿಕ್ಕಿದ ವಾಣಿಜ್ಯ ಬ್ಯಾಂಕ್ ಶಾಖೆಗಳಿವೆ. 1981ರ ಅಂಕಿ-ಅಂಶಗಳ ವರದಿಯಂತೆ ಸುಮಾರು 6,54,027 ಮಂದಿಗೆ ಬ್ಯಾಂಕ್ ಉದ್ಯೋಗ ಜೀವನೋಪಾಯ.

ಇವರಲ್ಲಿ ಸುಮಾರು ಒಂದೂವರೆ ಲಕ್ಷಕ್ಕೂ ಮೀರಿ ಅಧಿಕಾರಿಗಳಿದ್ದಾರೆ. ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಸಹ ಬ್ಯಾಂಕುಗಳಲ್ಲಿ ದುಡಿಯುತ್ತಿರುವ ಸಿಬ್ಬಂದಿ 1,62,853 ಮತ್ತು ಅಧಿಕಾರಿಗಳು 55,000ಕ್ಕೂ ಹೆಚ್ಚು. ಸುಮಾರು ರೂ. 63,000 ಕೋಟಿಯಷ್ಟು ಠೇವಣಿ ಮತ್ತು ರೂ. 40,000 ಕೋಟಿಯಷ್ಟು ಸಾಲದ ವಹಿವಾಟಿನ ಬೃಹತ್ ಜವಾಬ್ದಾರಿಯನ್ನು ಬ್ಯಾಂಕ್ ಉದ್ಯಮ ನಡೆಸಿಕೊಂಡು ಹೋಗುತ್ತಿದೆ.

ಸಂಘಟನೆಯ ಶಕ್ತಿ ಅಪಾರ. ಈ ಶಕ್ತಿಯ ಸದ್ವಿನಿಯೋಗ ಸಂಘಗಳ ನಾಯಕತ್ವವನ್ನು ಹೊತ್ತಿರುವವರನ್ನು ಅವಲಂಬಿಸಿದೆ. ಇಂದು ಕಾರ್ಮಿಕ ಪರತಂತ್ರ. ಅವನ ನೋವು ನಲಿವುಗಳ ಕಿಂಚಿತ್ತೂ ಅನುಭವವಿಲ್ಲದ ವೃತ್ತಿನಿರತ ರಾಜಕೀಯ ಪುಡಾರಿ ನಾಯಕರು ಕುಣಿಸುವ ಕೈಗೊಂಬೆಯಾಗಿದ್ದಾನೆ. ಅವನ ಸ್ವಾರ್ಥಸಾಧನೆಗೆ ಇವನ ಎಲ್ಲ ಶಕ್ತಿಯ ದುರುಪಯೋಗವಾಗುತ್ತಿದೆ. ಸ್ವಯಂ ಆಡಳಿತವನ್ನು ಹೊಂದಿರುವ ಕಾರ್ಮಿಕ ಸಂಘಗಳು ಅತಿ ವಿರಳ. ಕೇಂದ್ರಸರ್ಕಾರ "ಸಂಸ್ಥೆಗೊಂದು ಸಂಘ"ವಿರಬೇಕೆಂದು ಘೋಷಿಸುತ್ತಿದ್ದರೂ ಒಳಜಗಳಗಳಿಗೆ ಉತ್ತೇಜನ ನೀಡಿ ಕಾರ್ಮಿಕರ ಒಗ್ಗಟ್ಟನ್ನು ಮುರಿಯುವ ಸತತ ಪ್ರಯತ್ನ ನಡೆಸುತ್ತಲೇ ಬಂದಿದೆ.

ಭಾರತೀಯ ಸ್ಟೇಟ್ ಬ್ಯಾಂಕ್ ಉದ್ಯೋಗಿಗಳ ಸಂಘಟನೆಯ ಇತಿಹಾಸದಲ್ಲಿ ಸಮಾಧಾನ ನೀಡುವ ಅಂಶವೆಂದರೆ ಬಹು ಸಂಘಗಳು ಇಲ್ಲದಿರುವುದು ಮತ್ತು ಸ್ವಯಂ ಆಡಳಿತವುಳ್ಳ ಸಂಘಗಳು. ಇದು ಕಾರ್ಮಿಕರ ಸಂಘಟನೆಗೆ ಮತ್ತು ಪ್ರಜಾಪ್ರಭುತ್ವಕ್ಕೆ ಒಂದು ಅಮೂಲ್ಯವಾದ ಕಾಣಿಕೆ. ಸಿಬ್ಬಂದಿ ಮತ್ತು ಅಧಿಕಾರಿಗಳ ಸಂಘಗಳೆರಡು ತಮ್ಮ ಕಾಲ ಮೇಲೆ ತಾವೆ ನಿಂತು ತಮ್ಮ ಸಂಘಗಳನ್ನು ತಮ್ಮವೇ ಆದ ಸ್ವತಂತ್ರ ಧೋರಣೆಗಳೊಡನೆ ನಡೆಸಿಕೊಂಡು ಬರುತ್ತಿವೆ. ಬಹುಶಃ ಈ ಕಾರ್ಮಿಕ ಸ್ವಾತಂತ್ರ್ಯವೇ ಅವರ ಒತ್ತಳಿಕೆಯ ಬಲಿಷ್ಠ ಅಸ್ತ್ರವಾಗಿದೆ.

ರಾಷ್ಟ್ರದ ಸಂಪತ್ತು ಹೆಚ್ಚಬೇಕಾದರೆ ಈ ಸಂಘಗಳ ಪಾತ್ರ ಅನಿವಾರ್ಯ. ಅನಾವಶ್ಯಕ ಮುಷ್ಕರ, ಶಕ್ತಿಹಾನಿಗಳನ್ನು ತಡೆಗಟ್ಟಲು ಕಾರ್ಮಿಕರ ಒಗ್ಗಟ್ಟು ಅಗತ್ಯ. ಹಲವಾರು ದಶಕಗಳ ಹಿಂದೆಯೇ ಸಮತಾವಾದದ ಸಿದ್ಧಾಂತದ ಜನಕನೂ, ವರ್ಗಕಲಹದ ಪಿತಾಮಹನೂ ಆದ ಕಾರ್ಲ್ ಮಾರ್ಕ್ಸ್ ವಿಶ್ವಕಾರ್ಮಿಕರಿಗೆ ನೀಡಿದ ಬೀಜಮಂತ್ರ ಇಂದೂ ಪ್ರತಿಯೊಬ್ಬ ದುಡಿಮೆಗಾರನ ನರನಾಡಿಗಳಲ್ಲಿ ಚೇತನವನ್ನು ತುಂಬುತ್ತದೆ. ಆ ಬೀಜಮಂತ್ರವನ್ನುಚ್ಚರಿಸುತ್ತ ಈ ಲೇಖನವನ್ನು ಮುಗಿಸುತ್ತೇನೆ.

"ಜಗತ್ತಿನ ದುಡಿಮೆಗಾರರೆ, ಒಂದಾಗಿರಿ
ಕಾರ್ಮಿಕರ ಒಗ್ಗಟ್ಟು ಚಿರಾಯುವಾಗಲಿ."

# ಬ್ಯಾಂಕಿಂಗ್ ಪರಿಭಾಷೆ ಮತ್ತು ಸಹಕಾರಿ ಬ್ಯಾಂಕುಗಳು

ಸಾ. ರಾಜಗೋಪಾಲ

ಬ್ಯಾಂಕಿಂಗಿನ ಮೂಲ ಕಾರ್ಯಭಾರಗಳು ಮಾನವ ಸಮಾಜ ಬೆಳೆದು, ಎಲ್ಲ ಸಮಾಜಗಳಲ್ಲಿವೆಯಾದರೂ, ಈಗಿರುವಂತೆ ಒಂದು ನಿರ್ದಿಷ್ಟ ಸ್ವರೂಪವನ್ನು ಪಡೆದುದು ಒಂದು ಶತಮಾನದಿಂದೀಚೆಗೆ ಎನ್ನಬಹುದು.ಭಾರತದಲ್ಲಿ ಬ್ಯಾಂಕಿಂಗ್ ಈಗಿನ ಸ್ವರೂಪವನ್ನು ಪಡೆದುದು ಬ್ರಿಟಿಷ್ ಬ್ಯಾಂಕಿಂಗಿನ ಸಂಪರ್ಕದಿಂದ. ಠೇವಣಿ ಸ್ವೀಕಾರ ಮತ್ತು ಸಾಲನೀಡಿಕೆಗಳು ಮೂಲಕಾರ್ಯಭಾರಗಳಾದುದರಿಂದ ಅವುಗಳ ಬಗ್ಗೆ ನಮ್ಮ ಭಾಷೆಯಲ್ಲಿ ಹಲವಾರು ಪದಗಳು ಸೃಷ್ಟಿಯಾಗಿವೆ.

ಬ್ಯಾಂಕಿಂಗ್ ಭಾಷೆ ಒಂದು ಶಿಷ್ಟಭಾಷೆ. ಸಾಮಾನ್ಯವಾಗಿ ಎಲ್ಲ ಬ್ಯಾಂಕುಗಳಿಗೆ ಸಾಮಾನ್ಯವಾಗಿರುವ ಪದಗಳೇ ಹೆಚ್ಚು. ಕೆಲವಾರು ಪದ್ಧತಿಗಳಿಗೆ ವಿಶಿಷ್ಟವಾದ ಮತ್ತು ಭಿನ್ನವಾದ ಪದಗಳು ಹಲವಾರು ಬ್ಯಾಂಕುಗಳಲ್ಲಿರುತ್ತವೆ. ಆದರೆ ಬಹುಮಟ್ಟಿಗೆ ಏಕರೂಪದ ಪರ್ಯಾಯ ಪದಗಳಿರುತ್ತವೆ. ಆದುದರಿಂದ ಯಾವುದೇ ಬ್ಯಾಂಕಿನಲ್ಲಿ ಅವೇ ಪರ್ಯಾಯ ಪದಗಳು ಬಳಸಲ್ಪಡುತ್ತಿರುತ್ತವೆ. ಆದುದರಿಂದ ಬ್ಯಾಂಕಿಂಗ್ ಪರಿಭಾಷೆ ಶಿಷ್ಟಭಾಷೆಯಾಗಿರುತ್ತದೆ.

ಬ್ಯಾಂಕಿಂಗ್ ಜನಮುಖವಾದಂತೆ ಜನಭಾಷೆಯಲ್ಲಿನ ನುಡಿಗಳಿಂದಲೇ ಪರ್ಯಾಯ ಶಬ್ದಗಳನ್ನು ರೂಪಿಸಿಕೊಳ್ಳುವುದು ಸಾಮಾನ್ಯ. ಆದರೆ ಬ್ಯಾಂಕಿಂಗಿಗೆ ಬೇಕಾದ ಎಲ್ಲ ಪರ್ಯಾಯಗಳನ್ನು ಆಡುನುಡಿಯಿಂದಲೇ ಸೃಷ್ಟಿಸಲಾಗುವುದಿಲ್ಲ. ನಮ್ಮ ದೇಶದಲ್ಲಿ ಇದರ ಸಮಸ್ಯೆ ಇನ್ನಷ್ಟು ಜಟಿಲ. ಅನೇಕ ಭಾಷೆಗಳಲ್ಲಿ ಬ್ಯಾಂಕಿಂಗ್ ಪರಿಕಲ್ಪನೆಗಳನ್ನು ಸ್ಪಷ್ಟವಾಗಿ ಮತ್ತು ಜನಮನ ಮುಟ್ಟುವಂತೆ ಹೇಳಬೇಕಾಗುತ್ತದೆ. ಆದುದರಿಂದಮೊದಲು ಪ್ರಾದೇಶಿಕ ಭಾಷೆಗಳಲ್ಲಿ ಬ್ಯಾಂಕಿಂಗ್‌ನ ಅವತಾರವಾಗಬೇಕು. ಒಂದೊಂದು ಪ್ರದೇಶಕ್ಕೆ ಒಂದೊಂದು ಪರ್ಯಾಯ ಪದವಾದರೆ ಮತ್ತೆ ಅದರಲ್ಲಿ ಗೊಂದಲ ಉಂಟಾಗುತ್ತದೆ. ಆದುದರಿಂದ ಎರಡನೆಯ ಹಂತವಾಗಿ ಬ್ಯಾಂಕಿಂಗ್ ಶಬ್ದಗಳನ್ನು ಹಿಂದಿಯೂ ಸೇರಿದಂತೆ ಎಲ್ಲ ಭಾಷೆಗಳಲ್ಲಿ ಏಕವಾಗಿರುವಂತೆ ರೂಪಿಸಬೇಕಾಗಿದೆ. ಇಂಥ ಪ್ರಯತ್ನ ಆಗಲೆ ನಡೆದಿದೆ. ಆದಷ್ಟು ಏಕರೀತಿಯ ಶಬ್ದವನ್ನು ರೂಪಿಸುವುದು ಇದರ ಉದ್ದೇಶ.

ಇಷ್ಟೆಲ್ಲಾ ಪೀಠಿಕೆ ಹೇಳಿದ ಕಾರಣವೆಂದರೆ, ಸಾಮಾಜಿಕ ವಿಷಯವಾದ ಬ್ಯಾಂಕಿಂಗ್ ವಿಷಯದಲ್ಲಿ ಪರ್ಯಾಯ ಪದ ಸೃಷ್ಟಿ ಮಾಡುವಾಗ ಹಂತಹಂತದಲ್ಲಿ ಬರುವ ತೊಡಕುಗಳನ್ನು ಮನದಟ್ಟುಮಾಡಲು. ಇಲ್ಲಿ ಜನ, ಕಿವಿ, ಬಳಕೆ ಈ ಎಲ್ಲ ವಿಷಯ ಒಂದು ಪರ್ಯಾಯ ಶಬ್ದದ ಸೃಷ್ಟಿ ಮತ್ತು ಸ್ವೀಕರಣವನ್ನು ನಿರ್ಧರಿಸುತ್ತವೆ. ಈಗ ಚೆಕ್ಕು, ಡ್ರಾಫ್ಟು, ಮುಂತಾದ ಪದಗಳು ಇಂದು ನಮ್ಮವೇ ಆಗಿವೆ.

ಇಷ್ಟೆಲ್ಲಾ ತೊಡಕುಗಳ ನಡುವೆಯೂ ಶಬ್ದಗಳು ಬಳಕೆಗೆ ಬರುತ್ತಿರುತ್ತವೆ. ಇವನ್ನು ಸಾಮಾನ್ಯವಾಗಿ ಸಹಕಾರಿ ಬ್ಯಾಂಕುಗಳಲ್ಲಿ ಕಾಣಬಹುದು. ಸಹಕಾರಿ ಬ್ಯಾಂಕುಗಳು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಮೊದಲು ರೂಪುಗೊಂಡ ಸಂಸ್ಥೆಗಳು. ಇವುಗಳು ಬ್ಯಾಂಕಿಂಗ್ ಪರಿಭಾಷೆಗೆ ನೀಡಿರುವ ಕಾಣಿಕೆಯನ್ನು ಪರಿಶೀಲಿಸೋಣ.

ಗುಂತಾವಣೆ, ಬೂಡ ಮತ್ತು ಸಂಶಯಯುಕ್ತ ಸಾಲಗಳು, ದಂಡದ ಬಡ್ಡಿ, ವರ್ಗಮುಬಾದಿಲು, ಉಚಾಪತಿ ಸಾಲಗಳು, ರೋಖಪತ್ತು, ಐನ್ ಮುನಾಫೆ, ಬೇಬಾಕಿ, ತಾರಣ, ನಿಬಡ್ಡಿ,ಕಬ್ಜ, ಸಾಕೀನ, ಅಢಾವೆ ಪತ್ರ, ದುಡಿಯುವ ಬಂಡವಾಳ ಮುಂತಾದ ಪದಗಳನ್ನು ಕೇಳಿದಾಗ ಇವೆಲ್ಲಾ ಬ್ಯಾಂಕಿಂಗ್ ಪದಗಳೇ ಎಂದು ಆಶ್ಚರ್ಯವಾಗುತ್ತದೆ. ಇವೆಲ್ಲಾ ಬ್ಯಾಂಕಿಂಗ್ ಪದಗಳು.

ಮೇಲೆ ಹೇಳಿದ ಪದಗಳು Investment, bad and doubtful debts, penal interest, record of right, cash credit loans, net profit, No due, pledge, without interest, possession, at and post, Residing at, Balance Sheet, working capital, ಈ ಪದಗಳಿಗೆ ಪರ್ಯಾಯವಾಗಿ ಬಳಸುವ ಶಬ್ದಗಳಾಗಿವೆ.

ಸಹಕಾರಿ ಬ್ಯಾಂಕುಗಳು ಒಂದು ಊರಿನಲ್ಲಿ, ಒಂದು ಬಡಾವಣೆಯಲ್ಲಿ, ಒಂದು ತಾಲ್ಲೂಕು ಕೇಂದ್ರದಲ್ಲಿ ಕಾರ್ಯ ನಡೆಸುತ್ತಿದ್ದು, ಅವುಗಳ ಷೇರುದಾರರು ಮತ್ತು ಆಡಳಿತಗಾರರು ಸ್ಥಳೀಯರೇ ಆಗಿರುತ್ತಾರೆ. ಆದುದರಿಂದ ಈ

ಬ್ಯಾಂಕುಗಳು ಅಲ್ಲಿಯ ಭಾಷೆಯನ್ನು ಅನಿವಾರ್ಯವಾಗಿ ಬಳಸಬೇಕಾಗುತ್ತದೆ. ಸಾಮಾನ್ಯವಾಗಿ ಸಹಕಾರಿಗಳು ಒಂದೊಂದೇ ಇರುತ್ತವೆ. ಅವುಗಳಿಗೆ ಶಾಖೆಗಳಿರುವುದಿಲ್ಲ. ಆದುದರಿಂದ ಅವು ಎರಡು ಮೂರು ಭಾಷೆಗಳನ್ನು ಬಳಸುವ ಆವಶ್ಯಕತೆ ಉಂಟಾಗುವುದಿಲ್ಲ. ಅವುಗಳ ಅಧಿಕಾರ ವ್ಯಾಪ್ತಿ ಸಹ ಒಂದು ಸೀಮಿತ ಕ್ಷೇತ್ರಕ್ಕೆ ಅನ್ವಯಿಸುವುದರಿಂದ ಅಲ್ಲಿಯ ಭಾಷೆಯೇ ವ್ಯವಹಾರದಲ್ಲಿ ಬಳಕೆಗೆ ಬರುತ್ತದೆ. ಕರ್ನಾಟಕದಲ್ಲಿರುವ ಬಹುತೇಕ ಸಹಕಾರಿ ಬ್ಯಾಂಕುಗಳು ಕನ್ನಡವನ್ನೇ ಬಳಸುತ್ತಿವೆ.

ಮೇಲೆ ಹೇಳಿದ ಶಬ್ದಗಳು ಕೆಲವು ಮಾತ್ರ. ಇಂಥ ಅನೇಕ ಪದಗಳನ್ನು ಸಹಕಾರಿ ಬ್ಯಾಂಕುಗಳು ಅಳವಡಿಸಿ ಕೊಂಡಿವೆ. ಕೆಲವು ಬ್ಯಾಂಕುಗಳು ಕನ್ನಡ ಅಂಕಿಗಳನ್ನೇ ಬಳಸುತ್ತಿದ್ದರೆ ಮತ್ತೆ ಕೆಲವು ಬ್ಯಾಂಕುಗಳು ಆಂತರಿಕ ಲೆಕ್ಕಗಳನ್ನು, ಬ್ಯಾಂಕಿನ ಪುಸ್ತಕಗಳನ್ನು ಕನ್ನಡದಲ್ಲಿಟ್ಟಿರುವುದುಂಟು. ಈಗ ರಾಷ್ಟ್ರೀಕೃತವಾಗಿರುವ ಕರ್ನಾಟಕದ ಬ್ಯಾಂಕುಗಳ ೨೦–೩೦ ವರ್ಷಗಳ ಹಿಂದಿನ ಅಢಾವೆ ಪತ್ರಗಳನ್ನು ನೋಡಿದ್ದರೆ, ಅಲ್ಲಿಯೂ ಕನ್ನಡವನ್ನು ಬಳಸುತ್ತಿದ್ದುದು ಸ್ಪಷ್ಟವಾಗಿದೆ.

ಸಹಕಾರಿ ಬ್ಯಾಂಕುಗಳು ಘಟಕ ಬ್ಯಾಂಕಿಂಗ್ ಪದ್ಧತಿಯ (ಯೂನಿಟ್ ಬ್ಯಾಂಕಿಂಗ್ ಸಿಸ್ಟಮ್) ಉತ್ತಮ ಉದಾಹರಣೆಯಾಗಿವೆ. ಅಂದರೆ ಒಂದೇ ಬ್ಯಾಂಕಿನಲ್ಲಿ ಬ್ಯಾಂಕಿನ ಎಲ್ಲ ಸೇವೆಗಳನ್ನು ಕೊಡುವುದು. ಸಹಕಾರಿ ಬ್ಯಾಂಕುಗಳು ಸಾಮಾನ್ಯವಾಗಿ ಬಳಕೆದಾರರ ಸಾಲಗಳು, ಗೃಹನಿರ್ಮಾಣ ಸಾಲ, ಸಣ್ಣ ಕೈಗಾರಿಕೆಗಳು, ವೈಯಕ್ತಿಕ ಸಾಲಗಳನ್ನು ನೀಡುತ್ತವೆಯಾದುದರಿಂದ, ಆ ವಿಷಯಗಳನ್ನು ಕುರಿತಾದ ಶಬ್ದಗಳನ್ನು ಬಳಕೆಗೆ ತಂದಿವೆ. ಸಹಕಾರಿ ಬ್ಯಾಂಕುಗಳು ಒಂದು ನಿರ್ದಿಷ್ಟ ಪ್ರದೇಶದ ಮಿತಿಯಲ್ಲಿ ವ್ಯವಹಾರ ನಡೆಸುವುದರಿಂದ ಅಲ್ಲಿಯ ಭಾಷೆಯ ಶಬ್ದಗಳು ಸಹಜವಾಗಿ ಸೇರಿ, ಪ್ರಾದೇಶಿಕ ಪ್ರಭೇದಗಳನ್ನು ಉಂಟುಮಾಡಿವೆ. Net profit ಎಂಬ ಒಂದೇ ಪದಕ್ಕೆ ಖಾಸ್ ಮುನಾಫೆ, ಸಿಕ್ಕ ಲಾಭ, ನಿವ್ವಳ ಲಾಭ, ನಿವ್ವಳ ನಫೆ ಎಂದು ಬೇರೆಬೇರೆ ರೂಪಗಳಿವೆ. ಆದರೆ ಒಂದು ಶಾಸ್ತ್ರಭಾಷೆಯನ್ನು ಬಳಸುವಾಗ ಪದಗಳಲ್ಲಿ ಏಕರೂಪವಿರುವುದು ಅಥವಾ ಒಂದೇ ಪದವನ್ನು ಪರ್ಯಾಯ ಪದವನ್ನಾಗಿ ಬಳಸುವುದು ಅತ್ಯಾವಶ್ಯಕ. ಅಲ್ಲದೆ ಒಂದೇ ಇಂಗ್ಲಿಷ್ ಶೀರ್ಷಿಕೆಯನ್ನು ಬೇರೆಬೇರೆಯಾಗಿ ಭಾಷಾಂತರಿಸಿರುವುದುಂಟು. ಉದಾ: Bad and doubtful debts ಎಂಬುದನ್ನು ಬುಡಾ ಮತ್ತು ಸಂಶಯಯುಕ್ತ ಸಾಲಗಳು ಎಂದು ಒಂದು ಬ್ಯಾಂಕು ಅನುವಾದಿಸಿದರೆ, ಮತ್ತೊಂದು ಬ್ಯಾಂಕು ಅದನ್ನೆ ಸತ್ತ ಮತ್ತು ಸಂಶಯಾಸ್ಪದ ಸಾಲಗಳು ಎಂದು ಬಳಸಿದೆ. ಆದುದರಿಂದ ಮತ್ತೆ ಪರ್ಯಾಯಗಳು ಅನೇಕ ಕಡೆ ತಲೆದೋರಿ, ಅವು ಅವು ಬಳಸುವ ನಮೂನೆಗಳಿಗೂ ವಿಸ್ತರಿಸಿವೆ.

ಇದೆಲ್ಲವನ್ನು ಹೋಗಲಾಡಿಸುವ ಒಂದು ಮಾರ್ಗವೆಂದರೆ ಬ್ಯಾಂಕಿಂಗ್ ಪರಿಭಾಷೆಯನ್ನು ಏಕರೂಪಗೊಳಿಸುವುದು. ಬ್ಯಾಂಕಿನಲ್ಲಿ ಬಳಸುವ ನಮೂನೆಗಳು ಶಿಷ್ಟರೂಪ (ಸ್ಟ್ಯಾಂಡರ್ಡ್)ದವುಗಳಾದುದರಿಂದ ಅವುಗಳಲ್ಲಿರುವ ಭಾಷೆಯನ್ನು ಶಿಷ್ಟೀಕರಣ(ಸ್ಟ್ಯಾಂಡರ್ಡೈಸ್)ಗೊಳಿಸುವುದು ಕಷ್ಟವಾಗಲಾರದು. ಸರ್ಕಾರ, ಸಹಕಾರಿ ಇಲಾಖೆ, ನಗರೀಯ ಸಹಕಾರಿ ಬ್ಯಾಂಕುಗಳ ಒಕ್ಕೂಟ, ಬ್ಯಾಂಕಿಂಗ್ ತಜ್ಞರು ಕುಳಿತು ಈ ಕಾರ್ಯವನ್ನು ಮಾಡಿದರೆ, ಕನ್ನಡದಲ್ಲಿ ಬ್ಯಾಂಕಿಂಗ್ ಪರಿಭಾಷೆಗೆ ಒಂದು ನಿರ್ದಿಷ್ಟ ಸ್ವರೂಪ ಕೊಟ್ಟಂತಾಗುತ್ತದೆ. ಕನ್ನಡ ಬ್ಯಾಂಕಿಂಗ್ ಭಾಷೆಯಾಗಿ ಸ್ಥಿರಗೊಳ್ಳುತ್ತದೆ.

ಸಹಕಾರಿ ಬ್ಯಾಂಕುಗಳ ಪರಿಭಾಷೆ ಪರಿಷ್ಕೃತವಾದರೆ ಅದರಿಂದ ವಾಣಿಜ್ಯ ಬ್ಯಾಂಕುಗಳಿಗೂ ಲಾಭವುಂಟು. ಬ್ಯಾಂಕಿಂಗ್ ಪರಿಭಾಷೆಯ ಅಧೋರಚನೆ ಇಲ್ಲಿ ಸಿದ್ಧವಾಗುತ್ತದೆ. ಸಹಕಾರಿ ಮತ್ತು ವಾಣಿಜ್ಯ ಬ್ಯಾಂಕುಗಳಿಗೆ ಸಮಾನವಾದ ಸೇವೆಗಳಿಗೆ ಒಂದೇ ಶಬ್ದವಿದ್ದರೆ ಭಾಷೆಯ ಕಾರ್ಯಭಾರ ಹೆಚ್ಚುತ್ತದೆ. ಈಗ ಬಳಸುತ್ತಿರುವ ಮಾರುಕಟ್ಟೆಯ ಭಾಷೆಯನ್ನು ಶಿಷ್ಟ ಭಾಷೆಯಾಗಿ ಮಾರ್ಪಡಿಸಬೇಕಾಗಿದೆ.

ಅಢಾವೆ ಪತ್ರ, ದುಡಿಯುವ ಬಂಡವಾಳ ಇತ್ಯಾದಿಗಳು ಸಹಕಾರಿ ಬ್ಯಾಂಕುಗಳ ಕೊಡುಗೆ. ಇನ್ನೂ ಎಷ್ಟೋ ಪದಗಳನ್ನು ಸಂಸ್ಕರಿಸಿ ವಾಣಿಜ್ಯ ಬ್ಯಾಂಕುಗಳೂ ಬಳಸಬಹುದು. ಸಹಕಾರಿ ಕ್ಷೇತ್ರದಲ್ಲಿ ಬ್ಯಾಂಕಿಂಗ್ ಪರಿಭಾಷೆ ಅನೇಕತೆಯಿಂದ ಏಕರೂಪದ ಕಡೆಗೆ ಶೀಘ್ರವಾಗಿ ಪರಿವರ್ತಿತವಾಗಬೇಕಾಗಿದೆ.

●

---

# ಅನುಮಂತಣ್ಣನ ಬ್ಯಾಂಕ್ ವ್ಯವಹಾರ

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

## ಒಂದು ಹಾಸ್ಯ ಚಿತ್ರ

ಅನುಮಂತಣ್ಣ ಮಾಧ್ಯಮಿಕ ಶಾಲೆಯ ವರೆಗೆ ಮಾತ್ರ ಓದಿದ್ದು. ಮನೆಯಲ್ಲಿರುವ ಹಸು–ಎಮ್ಮೆಗಳನ್ನು ನೋಡಿಕೊಂಡರೆ ಸಾಕೆಂದು ಅವರಪ್ಪ ಮಗನನ್ನು ಶಾಲೆ ಬಿಡಿಸಿದ್ದ. ಈಗ ಅನುಮಂತಣ್ಣ ಹಾಲಿನ ವ್ಯಾಪಾರದಲ್ಲಿ ಸಾಕಷ್ಟು ಹಣ ಗಳಿಸಿದ್ದಾನೆ. "ಹೆಚ್ಚು ಹಣ ಕೈಯಲ್ಲಿರುವುದು ಬೇಡ. ಬ್ಯಾಂಕಿನಲ್ಲಿ ಸ್ವಲ್ಪ ಇಡು, ಕಷ್ಟಕ್ಕಾದೀತು" ಎಂದು ಅವನ ಸ್ನೇಹಿತನೊಬ್ಬ ಹೇಳಿದ. ಮನೆ ಹತ್ತಿರದಲ್ಲಿದ್ದ ಬ್ಯಾಂಕಿನ ಒಳಹೊಕ್ಕ ಅನುಮಂತಣ್ಣನಿಗೆ, ಮುಂಗಟ್ಟೆಯ ಹಿಂದೆ ಕುಳಿತಿದ್ದ ಗಂಡು–ಹೆಣ್ಣುಗಳು ಮತ್ತು ಗಾಜಿನ ಕೋಣೆಯಲ್ಲಿ ಕುಳಿತಿದ್ದ ವ್ಯವಸ್ಥಾಪಕರು ಇವರಲ್ಲಿ ಯಾರನ್ನು ಮಾತನಾಡಿಸುವುದು ಎಂಬುದು ತಿಳಿಯಲಿಲ್ಲ. ಅಲ್ಲೇ ನಿಂತಿದ್ದವರೊಬ್ಬರನ್ನು ಕೇಳಿ ಮುಂದೆ ಹೋದ. ಮುಂಗಟ್ಟೆಯ ಹಿಂದಿದ್ದವರೊಬ್ಬರು ಏನು ಬೇಕೆಂದು ಕೇಳಿದಾಗ "ದುಡ್ಡು ಮಡಗಬೇಕು" ಎಂದ ಅನುಮಂತಣ್ಣ. ಅವನ ಕೈಗೆ ಅರ್ಜಿ ನಮೂನೆ ಮತ್ತು ಮಾದರಿ ಸಹಿ ಕಾರ್ಡೊಂದನ್ನು ಕೊಟ್ಟು "ಇದನ್ನು ಭರ್ತಿಮಾಡಿಕೊಡಿ" ಎಂದು ತನ್ನ ಕೆಲಸದಲ್ಲಿ ಮಗ್ನರಾದರು ಆತ. ಇಂಗ್ಲಿಷಿನಲ್ಲಿದ್ದ ನಮೂನೆಯ ತಲೆ ಬುಡ ತಿಳಿಯದೆ ಸ್ವಲ್ಪ ಸಮಯ ಅನುಮಂತಣ್ಣ ನಿಂತಿದ್ದ. ಮತ್ತೆ ಹೇಳಿದ, "ಅದೇನ್ ಬರೀಬೇಕು, ಎಲ್ ಬರೀಬೇಕು, ನೀವೇ ಬರದ್ಬುಡಿ ಸ್ವಾಮಿ, ನಂಗ್ ಇಂಗ್ಲಿಷ್ ಬರಾಕಿಲ್ಲ."

"ನಿಮ್ಮ ಹೆಸರು ?"

"ಅನುಮಂತಣ್ಣ."

"ಹನುಮಂತಣ್ಣನೇ ?"

"ಊಂ. ಅನುಮಂತಣ್ಣ."

"ಏನು ಉದ್ಯೋಗ, ಅಂದ್ರೆ ಕೆಲ್ಸ, ಮಾಡ್ತೀರ ?"

"ಅಸ, ಎಮ್ಮೆ ಕರೀತೀನಿ. ನೀರ್ ಆಕ್ದೆ ಆಲ್ ಮಾರ್ತೀನಿ. ನಿಮ್ಮನೆ ಎಲ್ಲೈತೆ? ನಿಮ್ಗೂ ತಂದ್ಕೊಡ್ಲ?"

"ಬೇಡ ಬೇಡ, ಈಗ ಹೇಳಿ—ನಿಮ್ಮನೆ ವಿಳಾಸ."

"ಗಣಪತಿ ಗುಡಿ ಎದುರಿನ ಬೀದೀಲಿ ಬಲಕ್ಕೆ ಆರನೇ ಮನೆ."

"ಅಯ್ಯೋ ಹಾಗ್ಹೇಳಿದ್ರೆ ಆಗಲ್ಲ. ಮನೆ ನಂಬರ್, ಬೀದಿ ಹೆಸರು ಹೇಳಿ."

"ಅದೇ ಹೇಳಿದ್ನಲ್ಲ. ಆರು ಅಂತ. ದೇವಸ್ಥಾನದ ಎದುರು ಬೀದೀಲಿ."

"ಹಾಗೆ ಹೇಳಿದ್ರೆ ಸರಿಯಾಗಲ್ಲ ಸ್ವಾಮಿ. ನಿಮ್ಮನೆಗೆ ಪೋಸ್ಟ್ ಕಾಗದ ಯಾವ ವಿಳಾಸಕ್ಕೆ ಬರುತ್ತೆ, ತಿಳಿಸಿ."

"ಅದ್ಯಾವ ನನ್ಮಗ ನನಗ್ ಕಾಗ್ದ ಬರ್ಯೋನು ? ನಂ ಬೀದೀಗ್ ಪೋಸ್ಟ್‌ಮನ್ ಬರುವಾಗ ನಾ ಮನಗ್ ಬುಟ್ಟಿರ್ತೀನಿ. ಬೆಳಗ್ಗೆ ನಾಕ್ ಗಂಟೆಗೆದ್ದರೆ ಹತ್ತು ಗಂಟೆ ವರೆಗೆ ಮೈಮುರಿಯೋ ಕೆಲ್ಸ. ಹತ್ತು ಗಂಟೆಗೆ ತಿಂಡಿ ತಿಂದ್ ಮನಗಿದ್ರೆ ತಿರಗ ಒಂದು ಗಂಟೆಗೆದ್ದು ಊಟಮಾಡಿ ಮತ್ತೆ ಆಲ್ ಕರ್ಯೋದು, ಅಂಚೋದು, ಸಂಜೆ ವರ್ಗೆ."

"ಸ್ವಾಮಿ ಹೆಚ್ಚು ನನ್ನ ಸಮಯ ಕಳೀಬೇಡಿ. ಹನುಮಂತಣ್ಣ, ಹಾಲಿನ ವ್ಯಾಪಾರಿ ಗಣಪತಿ ಗುಡಿಬೀದಿ, ಮೈಸೂರು, ಅಂತ ಬರೀತೀನಿ ಬಿಡಿ....ಅರೆ ! ಯಾವ ಗಣಪತಿ ಗುಡಿಬೀದಿ ಸ್ವಾಮಿ ? ಈ ಊರಲ್ಲಿ ನೂರಾರು ಗಣಪತಿ ಗುಡಿಗಳಿವೆ."

"ಸುಬ್ಬಪ್ಪನ ಗಣಪತಿ ಗುಡಿ ಅಂತ ಬರೀರಿ."

"ಅದೇನ್ ಹಾಗಂದ್ರೆ."

"ಅದೇ ಅಲ್ಲಿ ಪೂಜೆ ಮಾಡೋನು ನಮ್ಮ ಸುಬ್ಬಪ್ಪ. ಅದ್ಕೆ ಸುಬ್ಬಪ್ಪನ ಗಣಪತಿ ಗುಡಿ ಅನ್ನೋದು."

"ಅದೆಲ್ಲ ಬರ್ಯೋಕಾಗಲ್ಲ. ಈಗ ನಮ್ಮ ಬ್ಯಾಂಕಿನಿಂದ ಯಾವ ಕಡೆ ನಿಮ್ಮ ಮನೆ ಇದೆ ತಿಳಿಸಿ. ಇಲ್ಲೂ ಒಂದು ಗಣಪತಿ ಗುಡಿ ಇದೆಯಲ್ಲ ಅದರ ಹತ್ರಾನೆ ನಿಮ್ಮ ಮನೆ ಇರೋದು ?"

"ಹೌದು, ನಿಮ್ಮ ಬ್ಯಾಂಕಿನ ಬೀದೀಲಿರೋ ಗಣಪತಿ ಗುಡೀಲೆ ಸುಬ್ಬಪ್ಪ ಪೂಜೆ ಮಾಡೋದು."

"ಸರಿ ನಿಮ್ಮ ವಿಳಾಸ ಈಗ ನನಗೆ ಗೊತ್ತಾಯ್ತು ಬಿಡಿ."

"ಈಗ ನಾನು X ಗುರ್ತು ಹಾಕಿರೋ ಕಡೆ ನಿಮ್ಮ ಸಹಿ ಹಾಕಿ."

"ಈ ಕಾಗದದ ಮೇಲೆ ಸಿಹಿ ಹಾಕೋದಾ ?"

"ಅಲ್ಲ ಸ್ವಾಮಿ ನಿಮ್ಮ ಸೈನ್ ಮಾಡಿ. ಅಂದ್ರೆ ನಿಮ್ಮ ಹೆಸ್ರು ಬರೀರಿ."

"ಏನ್ ತಮಾಸಿ ಮಾಡ್ತೀರಿ ಸ್ವಾಮಿ. ನನಗಿಂತ ಚೆನ್ನಾಗಿ ನೀವೆ ಬರೆದಿದ್ದೀರಿ ಬಿಡಿ."

"ಅಯ್ಯೋ ನಾನು ಬರೆದದ್ದು ಸಾಲ್ದು. ನೀವು ಹೇಗೆ ಬರೀತೀರಂತ ನಾವು ನೋಡಬೇಕು.. ನಾಳೆ ನೀವು ಹಣ ವಾಪಸ್ ತಗೋಬೇಕಾದ್ರೆ ಚೆಕ್ ಮೇಲೆ ಹೆಸರು ಬರೀಬೇಕು."

"ಹಣ ಬೇಕಾದ್ರೆ ನಿಮ್ಹತ್ರ ನಾನೇ ಬರ್‍ತೀನಿ. ನೀವೆ ಬರ್ದು ನನ್ನ ಸೈನ್ ಆಕ್ಬುಡಿ."

"ಈಗ ನೀವು ಸೈನ್ ಮಾಡಿ. ನಾನೊಂದು ಚೀಟಿ ಬರೆದು ಕೊಡ್ತೀನಿ. ಅದನ್ನು ತಗೊಂಡು ಹೋಗಿ ಅಲ್ಲಿ ಕಟ್‌ಕಟೆ ಒಳಗೆ ಕೂತಿದಾರಲ್ಲ, ಅವರ ಕೈಗೆ ಹಣದ ಸಮೇತ ಕೊಟ್ಬಿಟ್ಟು ಬನ್ನಿ. ನಿಮ್ಗೆ ಪಾಸ್ ಪುಸ್ತಕ ಕೊಡ್ತೀನಿ."

ಚಲನ್ ತೆಗೆದುಕೊಂಡು ಅನುಮಂತಣ್ಣ ನಗದು ಮುಂಗಟ್ಟೆಯ ಬಳಿ ಬಂದು ಚಡ್ಡಿ ಜೇಬಿಂದ ರೂ. 500 ತೆಗೆದು ಚಲನ್ ಕೂಡ ಅದನ್ನು ನಗದಿಗಾರರಿಗೆ ಕೊಟ್ಟು ಅಲ್ಲೇ ನಿಂತ. ನಗದಿಗಾರರ ಬಳಿ ಮೇಜಿನ ಮೇಲೆ ಸಾಲಾಗಿ ಜೋಡಿಸಿಟ್ಟ ನೋಟುಗಳ ಕಟ್ಟುಗಳು ಅನುಮಂತಣ್ಣನ ಕುತೂಹಲವನ್ನು ಕೆರಳಿಸಿದುವು. ಆ ಸಮಯದಲ್ಲಿ ನಗದಿಗಾರರು "ನೂರ ಐದು" ಎಂದು ಕೂಗಿದಾಗ ಬಿಲ್ಲೆಯೊಂದನ್ನು ಹಿಡಿದಿದ್ದ ವ್ಯಕ್ತಿ ಅದನ್ನು ಅವನಿಗೆ ಕೊಟ್ಟು ನಿಂತರು. ನಗದಿಗಾರರು ಅವರಿಗೆ ನೂರರ ಮೂರು ನೋಟುಗಳನ್ನು (ಅವೆಲ್ಲ ಅನುಮಂತಣ್ಣ ಕೊಟ್ಟ ನೋಟುಗಳು) ತೆಗೆದು ಕೊಟ್ಟರು. ಅನುಮಂತಣ್ಣ ಹೌಹಾರಿದ. "ಏನ್ ಸ್ವಾಮಿ, ನನ್ ದುಡ್ಡು ತೆಗೆದು ಅವ್ರಿಗೆ ಕೊಟ್ರಲ್ಲ!" ಎಂದ.

"ಯಾವುದು ನಿಮ್ಮ ದುಡ್ಡು? ಅದು ನಮ್ಮಲ್ಲೇ ಇದೆ. ಗಾಬರಿ ಬೀಳಬೇಡಿ."

"ಮತ್ತೆ ನಾನ್ ಕೊಟ್ಟ ನೋಟನ್ನೆ ನನ್ನೆದ್ರುಗೆ ಅವ್ರಿಗೆ ಕೊಟ್ರಲ್ಲ."

"ನಿಮ್ಮ ದುಡ್ಡೇನೂ ಅವರ ಕೈಗೆ ಹೋಗಿಲ್ಲ. ನಿಮ್ಮ ಹೆಸರಿನ ಲೆಕ್ಕದಲ್ಲೇ ಅದು ನಮ್ಮ ಹತ್ತಿರವೇ ಇದೆ. ಬೇಕಾದಾಗ ನೀವು ವಾಪಸ್ಸು ಪಡೆಯಬಹುದು."

"ನನ್ ಕಣ್ಣೆದ್ರುಗೆ ನನ್ ಹಣಾನ ಬೇರೆಯವರಿಗೆ ಕೊಟ್ರಿ. ನಾನ್ ಆ ಕಡೆ ಹೋದ್ಮೇಲೆ ಇನ್ನೇನ್ ಮಾಡ್ತೀರೋ. ನಿಮ್ನ ನಂಬೋದ್ ಹ್ಯಾಗ್ ಸ್ವಾಮಿ? ನನ್ ಹಣ ನಂಗೆ ಕೊಟ್ಬುಡಿ. ನಿಮ್ ಬ್ಯಾಂಕೂ ಬ್ಯಾಡಾ, ಚೆಕ್ಕೂ ಬ್ಯಾಡಾ."

---

ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿಯ ಬ್ಯಾಂಕಿಂಗ್ ಪದ್ಧತಿಗಳನ್ನು ನೋಡಿದರೆ ನಮಗೆ ದಂಗು ಬಡಿಯುವುದು ಖಂಡಿತ. ಈಚೆಗೆ ಬ್ಯಾಂಕಿಂಗ್ ಸಂಸ್ಥೆಯೊಂದರ ರಜತೋತ್ಸವ ಸಂದರ್ಭದಲ್ಲಿ ಒಂದು ವಾರ ಕಾಲ ಅದರ ಸಿಬ್ಬಂದಿಯವರೆಲ್ಲ ವಿವಿಧ ವೇಷಗಳನ್ನು ಧರಿಸಿ ಓಡಾಡುತ್ತಿದ್ದರು. ಬ್ಯಾಂಕ್ ವ್ಯವಸ್ಥಾಪಕರು ಅಲೆಮಾರಿಯ ವೇಷ ತಳೆದಿದ್ದರು. ವ್ಯವಹಾರದಲ್ಲೂ ಅವರ ತಲೆ ಬಲು ಚುರುಕು. ಬಹಳ ಫಲತ್ತಾದ್ದು. ಅರಿಜೋನದ ಬ್ಯಾಂಕೊಂದರಲ್ಲಿ ಅದರ 'ಸಣ್ಣ' ಗ್ರಾಹಕರ ಉಪಯೋಗಕ್ಕಾಗಿ 'ಪ್ರಾಮಾಣಿಕ ಬ್ಯಾಂಕ್ ಚೆಕ್ಕುಗಳ' ವ್ಯವಸ್ಥೆಯೊಂದನ್ನು ಜಾರಿಗೆ ತಂದದ್ದು ಇದಕ್ಕೆ ನಿದರ್ಶನ. ಚೆಕ್ ನಮೂನೆಗಳನ್ನು ವಿವಿಧ ಮೊಬಲಗುಗಳಲ್ಲಿ ನೀಡಲಾಗುತ್ತದೆ. ಗ್ರಾಹಕನ ಖಾತೆಯಲ್ಲಿ ಲಭ್ಯವಿರುವ ಮೊಬಲಗಿಗೆ ಇವು ಸೀಮಿತವಾಗಿರುತ್ತವೆ. ಅಂಥ ಚೆಕ್ಕುಗಳನ್ನು ಯಾರು ಬೇಕಾದರೂ ಹಿಂದೆ ಮುಂದೆ ನೋಡದೆ ಸ್ವೀಕರಿಸಬಹುದು. ಅವು ಪಾವತಿಯಾಗುವುದು ಖಂಡಿತ. ಮೀರೆಳೆತದ ಪ್ರಶ್ನೆಯೇ ಇಲ್ಲ.

ಎಪ್ಪತ್ತೈದು ವರ್ಷಗಳ ಹಿಂದೆ ಇಲ್ಲಿ (ಇಂಗ್ಲೆಂಡ್) ಇಂಥದೇ ನವೀನವ ಪದ್ಧತಿಯೊಂದನ್ನು ಜೇಮ್ಸ್ ಹರ್ಟ್ ಎಂಬಾತ ಆರಂಭಿಸಿದ್ದ. 'ಚೆಕ್ ಬ್ಯಾಂಕ್ ಲಿಮಿಟೆಡ್' ಎಂಬುದು ಸಂಸ್ಥೆಯ ಹೆಸರು. 'ಚೆಕ್ ನಮೂನೆಯ ಮೇಲೆ ಮುದ್ರಿಸಲಾದ ಹಣವನ್ನು ಠೇವು ಮಾಡದಿರುವ ವರೆಗೂ ಅದನ್ನು ಪಡೆಯುವಂತಿಲ್ಲವಾದ್ದರಿಂದ ಈ ಬ್ಯಾಂಕಿನ ಚೆಕ್ಕುಗಳು ಇತರ ಬ್ಯಾಂಕುಗಳ ಚೆಕ್ಕುಗಳಿಗಿಂತ ಒಂದು ಮುಖ್ಯ ವಿಚಾರದಲ್ಲಿ ಭಿನ್ನವಾಗಿವೆ. ಅದೆಂದರೆ, ಈ ಚೆಕ್ಕುಗಳನ್ನು ಹಾಜರುಪಡಿಸಿದಾಗ ಪಾವತಿ ಖಂಡಿತ' ಎಂದು ಆ ಸಂಸ್ಥೆ ತನ್ನ ಪ್ರಥಮ ವಾರ್ಷಿಕ ವರದಿಯಲ್ಲಿ ಹೇಳಲಾಗಿತ್ತು.

'ಬ್ಯಾಂಕರ್ಸ್ ಆಲ್ಮನಾಕ್'ನಲ್ಲಿ (ಕೈಪಿಡಿ) ಈ ಸಂಸ್ಥೆಯ ಬಗ್ಗೆ ಈ ವಿವರವಿದೆ. "ಚೆಕ್ ಬ್ಯಾಂಕ್...ಮುಚ್ಚಿಹೋದ್ದು 1901ರಲ್ಲಿ."

**—ಟಿ. ಆರ್. ಗಿಲ್ಬರ್ಟ್***

* Banking : *The Sunday Times* (1960)

# ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ಮತ್ತು ಬ್ಯಾಂಕುಗಳು

ಬಿ. ನಾಗಯ್ಯ ಶೆಟ್ಟಿ

ಭಾರತ ಹಳ್ಳಿಗಳ ದೇಶ. ಇಲ್ಲಿ ಶೇಕಡ 70ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಾರೆ. ಹಳ್ಳಿಯಲ್ಲಿರುವ ಜನರ ಪೈಕಿ ಶೇಕಡ 50.7ರಷ್ಟು ಜನರು ದಾರಿದ್ರ್ಯರೇಖೆಯ ಕೆಳಗೆ ಜೀವಿಸುತ್ತಾರೆ. ಅದೂ ಅಲ್ಲದೆ ನಮ್ಮದು ಅಭಿವೃದ್ಧಿಶೀಲ ದೇಶ. ನಮ್ಮ ಅಭಿವೃದ್ಧಿಗೆ ಯಾವ ಬಗೆಯ ಅಡಚಣೆಯೂ ಇಲ್ಲ. ಏಕೆಂದರೆ ನಮ್ಮಲ್ಲಿ ಸಂಪನ್ಮೂಲಗಳಿಗೆ, ಜನಸಂಪತ್ತಿಗೆ ಯಾವ ಕೊರತೆಯೂ ಇಲ್ಲ. 'ಭಾರತ ಒಂದು ಶ್ರೀಮಂತ ಬಡರಾಷ್ಟ್ರ' ಎಂದು ನಮ್ಮನ್ನು ವಿದೇಶಿ ಅರ್ಥಶಾಸ್ತ್ರಜ್ಞರು ಹೇಳುವುದುಂಟು. ಅವರ ಈ ಹೊಗಳಿಕೆಗಾದರೂ ನಾವು ಅಭಿವೃದ್ಧಿಹೊಂದಲೇಬೇಕು. ನಾವು ಕಷ್ಟಸಹಿಷ್ಣುಗಳು. ಹಾಗೆಯೇ ದಾರಿದ್ರ್ಯಸಹಿಷ್ಣುಗಳೂ ಹೌದು. ಸ್ವಾತಂತ್ರ್ಯ ದೊರಕಿ ಮೂವತ್ತಾರು ವರ್ಷ ಸಂದಿದ್ದರೂ ನಾವು ಅದನ್ನು ಸಹಿಸುತ್ತಾ ಇದ್ದೇವೆ.

ಆದರೆ ನಮ್ಮ ಸರಕಾರ ಅದನ್ನು ಸಹಿಸುವುದಿಲ್ಲ. ಸ್ವಾತಂತ್ರ್ಯಪೂರ್ವವೇ ಗಾಂಧಿಜೀಯವರು ರಾಮರಾಜ್ಯದ ಕನಸು ಕಂಡಿದ್ದರು. ಅಂತೆಯೇ ಸರಕಾರವೂ 'ಗರೀಬಿ ಹಠಾವೋ', 'ಹಸಿರು ಕ್ರಾಂತಿ', ಪ್ರಧಾನಿಯವರ 20 ಅಂಶಗಳ ಕಾರ್ಯಕ್ರಮ ಮುಂತಾದ ಕಾರ್ಯಕ್ರಮ ಅಥವಾ ಯೋಜನೆಗಳನ್ನು ಹಾಕಿಕೊಂಡಿದೆ. ಅಂತಹವುಗಳ ಪೈಕಿ ಇತ್ತೀಚೆಗಿನ ಕಾರ್ಯಕ್ರಮ ಎಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ (ಐ ಆರ್ ಡಿ ಪಿ—ಇಂಟೆಗ್ರೇಟೆಡ್ ರೂರಲ್ ಡೆವಲಪ್‌ಮೆಂಟ್ ಪ್ರೋಗ್ರಾಂ). ಪ್ರಾಯಶಃ ಬ್ಯಾಂಕುಗಳನ್ನು ನೇರ ತರಾಟೆಗೆ ತೆಗೆದುಕೊಂಡ ಕಾರ್ಯಕ್ರಮ ವಿದು ಎಂದರೆ ತಪ್ಪಾಗಲಾರದು.

### ಅರ್ಥ

ಇದು ಭಾರತ ಸರಕಾರದ ಒಂದು ಯೋಜನೆಯಾಗಿದ್ದು, ಬಡತನದ ವಿರುದ್ಧ ನಡೆಸುತ್ತಿರುವ ಒಂದು ಹೋರಾಟ. ದೇಶದ ಎಲ್ಲ ಐದು ಸಾವಿರದ ಹನ್ನೊಂದು ಅಭಿವೃದ್ಧಿ ಕ್ಷೇತ್ರಗಳಿಗೂ ಇದನ್ನು ಅನ್ವಯಿಸುವಂತೆ ಮಾಡಲಾಗಿದೆ. ಅಂತೆಯೇ ಹಳ್ಳಿಯ ಬಡಜನರ ಉದ್ಧಾರಕ್ಕಾಗಿ ಇಟ್ಟುಕೊಂಡಿರುವ ರಾಮಬಾಣ ಎಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ.

ಇದರ ಉದ್ದೇಶಗಳು ಇವು :

ಅ) ಗ್ರಾಮೀಣ ದುರ್ಬಲ ವರ್ಗಗಳವರಿಗೆ ಪೂರ್ಣ ಉದ್ಯೋಗ ದೊರಕಿಸುವುದು ಮತ್ತು ಅವರ ಜೀವನಮಟ್ಟವನ್ನು ಸುಧಾರಿಸುವುದು. ಒಂದು ನಿಶ್ಚಿತ ಕಾಲಾವಧಿಯಲ್ಲಿ ಉತ್ಪಾದನೆಯ ಯೋಜನೆಯನ್ನು ಹಾಕಿಕೊಳ್ಳುವುದರಿಂದ ಇದನ್ನು ಸಾಧಿಸಬಹುದು.

ಆ) ಈ ಕಾರ್ಯಕ್ರಮದ ಅನ್ವಯ ಇದರ ಪ್ರಯೋಜನವನ್ನು ಕುಟುಂಬದ ಒಬ್ಬ ವ್ಯಕ್ತಿಗೆ ದೊರಕಿಸುವುದರಿಂದ ಆ ಇಡೀ ಕುಟುಂಬವೇ ಸ್ವಾವಲಂಬಿಯಾಗುತ್ತದೆ. ಅಂದರೆ ಆ ಯಜಮಾನನನ್ನು ಅವಲಂಬಿಸಿರುವ ಕುಟುಂಬಕ್ಕೂ ಇದರಿಂದ ನೇರ ಪ್ರಯೋಜನ ದೊರಕಿಸುವುದು ಈ ಕಾರ್ಯಕ್ರಮದ ಮೂಲ ಉದ್ದೇಶಗಳಲ್ಲಿ ಒಂದು.

ಇ) ಎಲ್ಲಕ್ಕಿಂತ ಮಿಗಿಲಾಗಿ ಸ್ಥಳೀಯ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ತನ್ಮೂಲಕ ಹಳ್ಳಿಯ ಜನರ ಜೀವನಮಟ್ಟವನ್ನು ಸುಧಾರಿಸುವುದು ಈ ಕಾರ್ಯಕ್ರಮದ ಗುರಿ. ಉದಾಹರಣೆಗೆ ಗುಡಿ ಕೈಗಾರಿಕೆ, ಹೈನು ಉತ್ಪಾದನೆ, ಕುರಿಸಾಕಣೆ ಮತ್ತು ಕೋಳಿಸಾಕಣೆ ಮತ್ತು ಗ್ರಾಮೀಣ ಕುಶಲಕರ್ಮಿಗಳಿಗೆ ಈ ಕಾರ್ಯಕ್ರಮದ ಪ್ರಯೋಜನವನ್ನು ಒದಗಿಸುವುದು.

ಈ ಕಾರ್ಯಕ್ರಮದ ಅನ್ವಯ ಪ್ರತಿವರ್ಷವೂ 600 ಕುಟುಂಬಗಳನ್ನು ಒಂದೊಂದು ಗ್ರಾಮಗುಚ್ಛದಿಂದಲೂ (ಕ್ಲಸ್ಟರ್) ಆರಿಸಲಾಗುತ್ತದೆ. ಪ್ರತಿಯೊಂದು ಅಭಿವೃದ್ಧಿ ಕ್ಷೇತ್ರವನ್ನೂ ಅದರ ವಿಸ್ತಾರಕ್ಕೆ ಅನುಗುಣವಾಗಿ ಎಂಟು ಹತ್ತು ಗ್ರಾಮಗುಚ್ಛಗಳೆಂದು ವಿಂಗಡಿಸಲಾಗುತ್ತದೆ. ಹೀಗೆ ಆರನೆಯ ಯೋಜನೆಯ ಐದು ವರ್ಷಗಳಲ್ಲಿ ಪ್ರತಿ ಅಭಿವೃದ್ಧಿಕ್ಷೇತ್ರದ ಸುಮಾರು ಮೂರು ಸಾವಿರ ಕುಟುಂಬ

ಗಳು ದಾರಿದ್ರ್ಯ ರೇಖೆಯಿಂದ ಮೇಲೆ ಬರುವ ಸಾಧ್ಯತೆ ಇದೆ.

ಮೇಲಿನ ಯೋಜನೆಗೆ ಅನುಗುಣವಾಗಿ ಗ್ರಾಮೀಣ ಜನಸಂಖ್ಯೆಯನ್ನು ಈ ಕೆಳಗಿನಂತೆ ವಿಭಾಗಿಸಬಹುದು :

ಅ) ಸಣ್ಣ ರೈತರು ಎಂದರೆ, ಅವರ ಹಿಡುವಳಿ ತರಿ ಭೂಮಿಯಾಗಿದ್ದಲ್ಲಿ 2.50 ಎಕರೆಗಳಿಗಿಂತ ಕಡಿಮೆ, ಖುಷ್ಕಿ ಭೂಮಿಯಾಗಿದ್ದಲ್ಲಿ ಒಟ್ಟು 5 ಎಕರೆಗಳನ್ನು ಮೀರದ ಹಿಡುವಳಿ ಹೊಂದಿದವರು. ಸೀಮಾಂತ ರೈತರು (ಮಾರ್ಜಿನಲ್ ಫಾರ್ಮರ್ಸ್) 1 25 ಎಕರೆಗಳಿಗಿಂತ ಕಡಿಮೆ ತರಿ ಭೂಮಿ ಅಥವಾ 2.50 ಎಕರೆಗಳಿಗಿಂತ ಕಡಿಮೆ ಖುಷ್ಕಿ ಭೂಮಿ ಹಿಡುವಳಿ ಇರುವವರು.

ಆ) ಕೃಷಿ ಕಾರ್ಮಿಕರು ವಾರ್ಷಿಕ ವರಮಾನದ ಶೇಕಡ 50ರಷ್ಟು ಅಥವಾ ಅದಕ್ಕಿಂತಲೂ ಹೆಚ್ಚು ಕೃಷಿಯಿಂದಲೇ ಪಡೆಯುವವರು. ಇವರು ಕೃಷಿ ಅವಲಂಬಿತ ಕಾರ್ಮಿಕರು. ಇವರಿಗೆ ಯಾವುದೇ ಹಿಡುವಳಿ ಇರುವುದಿಲ್ಲ.

ಇ) ಗ್ರಾಮೀಣ ಕುಶಲಕರ್ಮಿಗಳು ಮತ್ತು ವ್ಯವಸಾಯೇತರ ಕಾರ್ಮಿಕರು. ಇವರ ಮಾಸಿಕ ಕೂಲಿ ರೂ. 200ಕ್ಕಿಂತ ಹೆಚ್ಚಾಗಿರುವುದಿಲ್ಲ. ಅಂದರೆ ಇವರ ದಿನಗೂಲಿ ಸುಮಾರು ರೂ. 6.

ಈ) ಇತರರು : ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದವರು. ಇವರು ಹೆಚ್ಚಾಗಿ ಹರಿಜನ ಗಿರಿಜನರು.

ಗ್ರಾಮೀಣ ಜನರನ್ನು ಉದ್ಯೋಗ ಮತ್ತು ಪಂಗಡದ ಆಧಾರದ ಮೇಲೆ ವಿಂಗಡಿಸಲಾಗಿದ್ದರೂ ಸಾಮಾನ್ಯವಾಗಿ ಎಲ್ಲ ವಿಧದ ಜನರಿಗೆ ಅನ್ವಯಿಸುವಂತೆ ಅವರ ವಾರ್ಷಿಕ ವರಮಾನವನ್ನು ಮೂಲವಾಗಿರಿಸಿಕೊಂಡು ಒಂದು ಪರಿಮಿತಿಯನ್ನು ಇಟ್ಟುಕೊಳ್ಳಲಾಗಿದೆ. ಹಾಗೆಯೇ ಒಬ್ಬನ ವಾರ್ಷಿಕ ವರಮಾನ ಯಾವ ರೂಪದಿಂದಲೂ ರೂ. 700ಕ್ಕೆ ಮೀರಕೂಡದು... ಬಾರದು. ಅಥವಾ ಅವನ ಕುಟುಂಬದ ವರಮಾನ ವರ್ಷಕ್ಕೆ ರೂ. 3,500ಕ್ಕೆ ಮೀರಿರಬಾರದು. ಈ ಉದ್ದೇಶಕ್ಕಾಗಿ 5 ಜನರ ಸದಸ್ಯತ್ವ ಹೊಂದಿರುವ ಒಂದು ಘಟಕವನ್ನು ಒಂದು ಕುಟುಂಬ ಎಂದು ಕರೆಯಲಾಗುತ್ತದೆ. ಸದಸ್ಯರು 5 ಜನಕ್ಕಿಂತ ಕಡಿಮೆ ಇದ್ದಲ್ಲಿ ತಲಾ ರೂ. 700 ವಾರ್ಷಿಕ ವರಮಾನದ ಆಧಾರದ ಮೇಲೆ ಪರಿಗಣಿಸಬೇಕಾಗುತ್ತದೆ. ಈ ಮೊದಲು ಒಬ್ಬ ವ್ಯಕ್ತಿ ಎಂದರೆ ಒಂದು ಘಟಕ ಎಂದು ತೆಗೆದುಕೊಳ್ಳಲಾಗುತ್ತಿತ್ತು.

## ಸಂಸ್ಥೆಯ ಅಧಿಕಾರಿಗಳ ಪಾತ್ರ

ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಡಿ ಆರ್ ಡಿ ಎಸ್) ಮತ್ತು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಅಧಿಕರಣ (ಡಿ ಆರ್ ಡಿ) ಇವುಗಳ ಪಾತ್ರ : ಈ ಕಾರ್ಯಕ್ರಮವನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ನೆರವೇರಿಸಿಕೊಡುತ್ತಾರೆ. ಅವರ ಪಾತ್ರ ಬಹು ಮುಖ್ಯವಾದುದು. ಮೊದಲನೆಯದಾಗಿ ಅರ್ಹತೆಯುಳ್ಳ ಕುಟುಂಬವನ್ನು ಗುರುತಿಸಿ ಅದಕ್ಕೆ ಬ್ಯಾಂಕು ಅಥವಾ ಹಣಕಾಸು ಸಂಸ್ಥೆಗಳ ಸಂಪರ್ಕ ಕಲ್ಪಿಸಿಕೊಡುವುದು.

ಎರಡನೆಯದಾಗಿ ಫಲಾನುಭವಿಗಳಿಗೆ (ಬೆನಿಫಿಷಿಯರೀಸ್) ತಕ್ಕ ಆರ್ಥಿಕ ಕಾರ್ಯಕ್ರಮಗಳನ್ನು ಗುರುತಿಸುವುದು. ಉದಾಹರಣೆಗೆ ಕುರುಬರಿಗೆ ಕುರಿಯನ್ನು ಒದಗಿಸುವುದು. ಗೊಲ್ಲರಿಗೆ ಎಮ್ಮೆ ಅಥವಾ ಹಸುವನ್ನು ಕೊಡಿಸುವುದು. ಬಡಗಿಗೆ ಕೃಷಿ ಉಪಕರಣಗಳ ತಯಾರಿಕೆಗೆ ಬೇಕಾದ ಕಚ್ಚಾ ಸಾಮಗ್ರಿಗಳನ್ನು ಒದಗಿಸುವುದು, ಇತ್ಯಾದಿ.

ಮೂರನೆಯದಾಗಿ ಹೀಗೆ ಗುರುತಿಸಿದ ಪ್ರತಿ ಫಲಾನುಭವಿಯೂ ಮತ್ತೆ ಅವನ ಆರ್ಥಿಕ ಚಟುವಟಿಕೆಗಳ ಪಟ್ಟಿಯನ್ನು ಸಂಬಂಧಪಟ್ಟ ಬ್ಯಾಂಕು ಅಥವಾ ಹಣಕಾಸು ಸಂಸ್ಥೆಗೆ ಕಳುಹಿಸಿಕೊಡುವುದು. ಇದನ್ನು ಹೆಚ್ಚಾಗಿ ಸಂಬಂಧಪಟ್ಟ ಕ್ಷೇತ್ರಾಭಿವೃದ್ಧಿ ಕಚೇರಿಯವರೆ ನೆರವೇರಿಸಿಕೊಡುತ್ತಾರೆ. ಅದೂ ಅಲ್ಲದೆ ಆಯಾ ಆರ್ಥಿಕ ಚಟುವಟಿಕೆಗಳಿಗೆ ಅನ್ವಯಿಸುವಂತೆ ಮೂಲ ರಚನಾಸೌಲಭ್ಯಗಳನ್ನು ಸಹ ಇವರು ಲಭಿಸುವಂತೆ ಮಾಡುತ್ತಾರೆ.

ಕೊನೆಯದಾಗಿ ಸರಕಾರದ ವತಿಯಿಂದ ಲಭ್ಯವಾಗುವ ಸಹಾಯಧನವನ್ನು ಅವರೇ ಬ್ಯಾಂಕುಗಳ ಮೂಲಕ ಸಾಲಗಾರರ ಖಾತೆಗೆ ತಲುಪುವಂತೆ ಮಾಡುತ್ತಾರೆ. ಇದೇ ರೀತಿ ಈ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಜಿಲ್ಲಾಧಿಕಾರಿಗಳು ಪೂರ್ಣ ಹೊಣೆ ಹೊಂದಿರುತ್ತಾರೆ.

ಮೊದಲೇ ತಿಳಿಸಿದಂತೆ ಗ್ರಾಮಗುಚ್ಛಗಳನ್ನು ಆರಿಸುವಾಗ ಅಧೋರಚನೆ (ಇನ್‌ಫ್ರಾ-ಸ್ಟ್ರಕ್ಚರ್), ಬ್ಯಾಂಕ್ ಮುಂತಾದ ಹಣಕಾಸು ಸಂಸ್ಥೆಯ ಅಸ್ತಿತ್ವ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಜನಸಾಂದ್ರತೆ ಮತ್ತು ಬಡವರಲ್ಲಿ ಬಡವರು-ಅಂದರೆ ದಾರಿದ್ರ್ಯರೇಖೆಯಿಂದ ಕೆಳಗೆ ಇರುವವರು—ಇವರುಗಳ ಸಂಖ್ಯೆಯನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಬಡವರಲ್ಲಿ ಬಡವರು ನಮ್ಮಲ್ಲಿ ಕಡಿಮೆ ಇಲ್ಲವಾದರೂ ಮನೆಮನೆಗೂ ಹೋಗಿ ಸಂಬಂಧಪಟ್ಟವರು ಸರ್ವೆ ನಡೆಸಬೇಕಾಗುತ್ತದೆ. ಈ ಯೋಜನೆಯ ಮೂಲ ಉದ್ದೇಶದಂತೆ ಬ್ಯಾಂಕುಗಳು ಈ ಕೆಳಗಿನ ಉದ್ದೇಶಗಳಿಗೆ ಸಾಲ ಸೌಲಭ್ಯ ನೀಡಬೇಕಾಗುತ್ತದೆ :

ಅ) ಭೂ ಅಭಿವೃದ್ಧಿ, ಬಾವಿಗಳ ನಿರ್ಮಾಣ, ಹಳೆ ಬಾವಿಗಳ ದುರಸ್ತಿ, ಪಂಪ್‌ಸೆಟ್‌ಗಳನ್ನು ಖರೀದಿಸುವುದು, ಪಂಪ್ ಹೌಸ್‌ಗಳ ನಿರ್ಮಾಣ, ಡೀಸೆಲ್ ಇಂಜಿನುಗಳನ್ನು ಖರೀದಿಸುವುದು ಮುಂತಾದ ಉದ್ದೇಶಗಳಿಗೆ ಸಾಲ ನೀಡುವುದು.

ಆ) ಹೈನುಗಾರಿಕೆ, ಕೋಳಿ ಸಾಕಣೆ, ಹಂದಿ ಸಾಕಣೆ, ಕುರಿ ಸಾಕಣೆ, ಬಾತುಕೋಳಿ ಸಾಕಣೆ, ಮೀನುಗಾರಿಕೆ ಮುಂತಾದ ಉಪ ಉದ್ಯೋಗಗಳಿಗೆ ಸಾಲ ಸೌಲಭ್ಯ ಒದಗಿಸುವುದು.

೯) ಕುಂಬಾರ, ಕಂಬಾರ, ಬಡಗಿ ಮುಂತಾದ ಗ್ರಾಮೀಣ ಕುಶಲಕರ್ಮಿಗಳಿಗೆ ಕಚ್ಚಾ ಸಾಮಗ್ರಿಗಳನ್ನು ಕೊಳ್ಳುವುದಕ್ಕೆ ಮತ್ತು ಇಂತಹದೇ ಲಾಭದಾಯಕ ಉದ್ಯೋಗಿಗಳಿಗೆ ಬೇಕಾದ ಹಣ ಸೌಲಭ್ಯ ಸಾಲರೂಪದಲ್ಲಿ ನೀಡುವುದು.

ಹೀಗೆ ಗ್ರಾಮೀಣ ಜನತೆಯ ಸರ್ವತೋಮುಖ ಅಭಿವೃದ್ಧಿಗೆ ಹಾಕಿಕೊಂಡಿರುವ ಸುಂದರ ಯೋಜನೆಯೆಂದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ. ಇಲ್ಲಿ ಬ್ಯಾಂಕಿನ ಪಾತ್ರ ಬಹು ಮಹತ್ತ್ವದ್ದಾಗಿದೆ. ಸಾಲ ಸೌಲಭ್ಯ ಅಥವಾ ಬ್ಯಾಂಕಿನ ಸೌಕರ್ಯಗಳು ಶ್ರೀಮಂತರಿಗೆ ಮಾತ್ರ ಅಥವಾ ಪಟ್ಟಣದ ಜನರಿಗೆ ಮಾತ್ರ ದೊರೆಯುತ್ತಿದ್ದು, ಬಡವರಿಗೆ ಬ್ಯಾಂಕಿನ ಸಂಪರ್ಕ ತುಂಬಾ ಕಡಿಮೆ ಇತ್ತು. ಹೀಗಾಗಿ ಬ್ಯಾಂಕೆಂದರೆ ಶ್ರೀಮಂತರಿಗೆ ಅಥವಾ ಪಟ್ಟಣದ ಜನರಿಗೆ ಮಾತ್ರ ಸೀಮಿತವೆಂದು ಭಾವಿಸುವುದು ಸಹಜವಾಗಿದೆ. ಇದಕ್ಕೆ ಇನ್ನೊಂದು ಕಾರಣವೇನೆಂದರೆ, ಈಗ ರಾಷ್ಟ್ರೀಕೃತವಾಗಿರುವ ಬಹುತೇಕ ಬ್ಯಾಂಕುಗಳು ಈ ಹಿಂದೆ ಖಾಸಗಿ ಕ್ಷೇತ್ರದಲ್ಲಿದ್ದು ಕಾರ್ಯ ನಿರ್ವಹಿಸುತ್ತಿದ್ದುವು. ಅವು ತಾವು ನೀಡಿದ ಸಾಲದ ಸುರಕ್ಷತೆಗಾಗಿ ಸಮಾಜದ ಗಣ್ಯ ವರ್ಗದವರಿಗೆ ಮಾತ್ರ ಸಾಲವನ್ನು ನೀಡುವುದು ಸಹಜವಾಗಿತ್ತು.

ಆದರೆ ಇಂದು ಕಾಲ ಬದಲಾಗಿದೆ. ರಾಷ್ಟ್ರೀಕೃತವಾದ ಮೇಲೆ ಬ್ಯಾಂಕುಗಳ ಮೇಲೆ ಕೆಲವು ಕಟ್ಟುಪಾಡುಗಳನ್ನು ವಿಧಿಸಲಾಗಿದೆ. ಇಂತಹವುಗಳಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮವೂ ಒಂದು. ಇದು ಬ್ಯಾಂಕುಗಳ ಮೇಲೆ ಹೇರಿರುವ ಒಂದು ಸಾಮಾಜಿಕ ಹೊಣೆ. ಅಂದು ಸಾಲ ಪಡೆಯುವವರು ಬ್ಯಾಂಕುಗಳನ್ನು ಹುಡುಕುತ್ತಾ ಹೋಗುತ್ತಿದ್ದರೆ, ಇಂದು ಸಾಲ ಪಡೆಯುವವರನ್ನು ಬ್ಯಾಂಕು ಗುರುತಿಸಬೇಕಾಗುತ್ತದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ವ್ಯಾಪಕವಾಗಿ ಹರಡಿ ಸಂಪೂರ್ಣ ಸಫಲವಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಕಾರಣ, ಈ ಸಾಲ ಸೌಲಭ್ಯ ಸಾಲಗಾರನ ಮೇಲೆ ಬೇರೆ ಸಾಲಗಳಂತೆ ಹೊರೆಯಾಗುವುದಿಲ್ಲ. ಸಾಲ ಶೂಲವಾಗುವುದಿಲ್ಲ. ಇದರ ವಿಶಿಷ್ಟತೆ ಎಂದರೆ, ಸಣ್ಣ ರೈತರಿಗೆ ಸರಕಾರ ಶೇಕಡ 25ರಂತೆಯೂ ಸೀಮಾಂತ ರೈತರಿಗೆ, ಕೃಷಿ ಕಾರ್ಮಿಕರಿಗೆ ಮತ್ತು ಗ್ರಾಮೀಣ ಕುಶಲಕರ್ಮಿಗಳಿಗೆ ಹಾಗೂ ಅನುಸೂಚಿತ ಜಾತಿ ಪಂಗಡಗಳವರಿಗೆ ಶೇಕಡ 33.33ರಂತೆಯೂ ಸಹಾಯಧನವನ್ನು ಒದಗಿಸುತ್ತದೆ. ಉಳಿದ ಹಣ ಮಾತ್ರ ಬ್ಯಾಂಕ್ ಸಾಲವಾಗಿರುತ್ತದೆ. ಅದೂ ಅಲ್ಲದೆ ಸಾಲದ ಮೇಲಿನ ಬಡ್ಡಿ ತೀರಾ ಕಡಿಮೆಯಾಗಿರುತ್ತದೆ. ಅರ್ಹತೆ ಉಳ್ಳವರಿಗೆ ಭಿನ್ನಕ ಬಡ್ಡಿದರದಲ್ಲೂ (ಡಿಫರೆನ್ಷಿಯಲ್ ರೇಟ್ ಆಫ್ ಇಂಟರೆಸ್ಟ್: ಡಿ ಆರ್ ಐ), ಉಳಿದವರಿಗೆ ಶೇಕಡ 10.50ರಂತೆಯೂ ಈ ಸಾಲದ ಮೇಲೆ ಬಡ್ಡಿ ವಿಧಿಸಲಾಗುತ್ತದೆ. ಇದು ಬೇರೆ ಸಾಲಗಳಿಗೆ ಹೋಲಿಸಿದರೆ ತುಂಬ ಕಡಿಮೆ ದರದ ಬಡ್ಡಿಯಾಗಿದ್ದು, ಇದರಿಂದ ಬಡ ಜನರು ಸಾಹುಕಾರಿ ಅಥವಾ ಖಾಸಗಿ ಸಾಲಗಳಿಂದ ವಿಮುಕ್ತರಾಗಬಹುದು. ಇನ್ನು ಈ ಸಾಲವನ್ನು ಸುಲಭ ಕಂತುಗಳಲ್ಲಿ ಮಧ್ಯಾವಧಿ ಮತ್ತು ದೀರ್ಘಾವಧಿಗಳಲ್ಲಿ ತೀರಿಸಬಹುದು. ಸಾಲ ಮರುಪಾವತಿಯ ಭಾರ ಕಡಿಮೆಯಾಗುತ್ತದೆ.

ಸಾಮೂಹಿಕ ಸಣ್ಣ ನೀರಾವರಿ ಯೋಜನೆಗಳಿಗೆ ಇನ್ನೂ ಹೆಚ್ಚಿನ ಉತ್ತೇಜನವಿದ್ದು ಇದಕ್ಕೆ ಸರಕಾರದಿಂದ ಸಹಾಯಧನ ಶೇಕಡ 50ರಷ್ಟು ಸಿಗುತ್ತದೆ.

ಈ ದಿಶೆಯಲ್ಲಿ ಬ್ಯಾಂಕುಗಳು ಸಾಧಿಸಬೇಕಾಗಿರುವುದು ತುಂಬಾ ಇದೆ. ಹಣಕಾಸು ಒದಗಿಸುವುದು ಮಾತ್ರವೇ ಇದರ ಗುರಿಯಲ್ಲ. ಈ ಕಾರ್ಯಕ್ರಮದ ಅಂತಿಮ ಫಲ ಜನರಿಗೆ ತಲುಪಿದೆಯೇ ಇಲ್ಲವೇ ಎಂದು ನೋಡಬೇಕು. ಸಾಲ ಮರುಪಾವತಿ ಪಡೆಯುವುದರೊಂದಿಗೆ ಅದರ ಪ್ರಯೋಜನ ಜನರಿಗೆ ತಲುಪಿದೆಯೇ ಎಂದು ಖಾತರಿ ಮಾಡಿಕೊಳ್ಳುವುದು ಕೂಡ ಬ್ಯಾಂಕುಗಳು ವಹಿಸಬೇಕಾದ ಒಂದು ಹೊಣೆ.

## ಕೆಲವು ಸಲಹೆಗಳು

ಉದಾಹರಣೆಗೆ ಹೈನುಗಾರಿಕೆಯನ್ನು ತೆಗೆದುಕೊಳ್ಳೋಣ. ಸಾಕಷ್ಟು ಹಾಲು ಉತ್ಪಾದನೆಯಾದಾಗ ಅದಕ್ಕೆ ಹೆಚ್ಚು ಬೇಡಿಕೆ ಇಲ್ಲದೆ ಉತ್ಪಾದಕರಿಗೆ ನ್ಯಾಯವಾದ ಬೆಲೆ ಸಿಗದೆ ಇರಬಹುದು. ಇಂಥ ಸಂದರ್ಭಗಳಲ್ಲಿ ಸರಕಾರ ಮುಂದೆ ಬಂದು ಹಾಲು ಸಂಗ್ರಹಣಾಲಯವನ್ನು ಸ್ಥಾಪಿಸಬೇಕು; ಮತ್ತು ಅವರಿಗೆ ನ್ಯಾಯ ಬೆಲೆ ಸಿಗುವಂತೆ ಮಾಡಬೇಕು. ಹಾಗೆಯೇ ಹಳ್ಳಿಗಳಲ್ಲಿ ಪಶುವೈದ್ಯ ಶಾಲೆಗಳನ್ನು ಸ್ಥಾಪಿಸಿ ಪಶುಗಳಿಗೆ ಚಿಕಿತ್ಸೆ ಒದಗಿಸುವುದರೊಂದಿಗೆ ಸುಧಾರಿತ ತಳಿಯ ಹಸುಗಳನ್ನು ಸಾಕುವುದು, ಹೆಚ್ಚು ಹಾಲು ಉತ್ಪಾದನೆ ಮುಂತಾದ ವಿಷಯಗಳಲ್ಲಿ ತರಬೇತು ನೀಡಬೇಕು. ಅಂತೆಯೇ ವ್ಯವಸಾಯೋತ್ಪನ್ನಗಳ ಮಾರಾಟಕ್ಕೆ ಬೇಕಾದ ಮಾರುಕಟ್ಟೆಗಳನ್ನು ಒದಗಿಸುವುದು ಮತ್ತು ಅವುಗಳ ಸಾಗಣೆಗೆ ಬೇಕಾದ ರಸ್ತೆ ಮತ್ತು ವಾಹನ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕು. ಹೀಗೆ ಎಲ್ಲ ಬಗೆಯ ಆರ್ಥಿಕ ಚಟುವಟಿಕೆಗಳಿಗೆ ಉತ್ಪಾದನೆಯ ಹಂತದಿಂದ ಮಾರುಕಟ್ಟೆಯ ಹಂತದವರೆಗೆ ಬೇಕಾದ ಏರ್ಪಾಟು ಮತ್ತು ತರಬೇತುಗಳನ್ನು ಒದಗಿಸಬೇಕು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಸಫಲತೆ ಗ್ರಾಮೀಣ ಜನತೆಯನ್ನು ಹೊಂದಿಕೊಂಡಿದೆ. ಅವರ ಉದ್ಧಾರವಾಗುವುದು ಅವರ ಕೈಯಲ್ಲಿದೆ. ಅದನ್ನು ಸದುಪಯೋಗಪಡಿಸಿಕೊಳ್ಳುವುದು ಅವರ ಹೊಣೆಗಾರಿಕೆಯಾಗಿರಬೇಕು. ಹಿಂದಿನ ಕೆಲವು ಗ್ರಾಮೀಣ ಯೋಜನೆಗಳ ವಿಫಲತೆಗೆ ಕಾರಣವಾದ ಗ್ರಾಮೀಣ ಅನಕ್ಷರತೆ, ಅಜ್ಞಾನ, ಅಲಕ್ಷ್ಯ ಭಾವನೆಗಳು ತಮ್ಮ ಕರಾಳ ಪಾತ್ರ ವಹಿಸಿ ಇಲ್ಲಿಯೂ ಕೆಟ್ಟ ಪರಿಣಾಮ ಬೀರಬಹುದು. ಆದುದ

# ಬ್ಯಾಂಕರರ ತರಬೇತಿ

ಅ. ಚ. ಅಶೋಕ ಕುಮಾರ

"ತರಬೇತಿ ಮನುಷ್ಯನನ್ನು ಪರಿಪೂರ್ಣನನ್ನಾಗಿ ಮಾಡುತ್ತದೆ." ಇದು ಅಕ್ಷರಶಃ ನಿಜ.

ಭಾರತೀಯ ಬ್ಯಾಂಕುಗಳಿಗೆ ತರಬೇತಿಯಲ್ಲಿ ಸಾಕಷ್ಟು ಅನುಭವವಿದೆ ಕೆಲವು ಬ್ಯಾಂಕುಗಳು ಅತ್ಯಂತ ತರ್ಕಬದ್ಧವಾದ ತರಬೇತಿ ಕೇಂದ್ರ ಮತ್ತು ಪದ್ಧತಿಯನ್ನು ಸಹ ಹೊಂದಿವೆ. ಆದರೂ ತರಬೇತಿ ಸೂತ್ರವನ್ನು ಯೋಜನೆ ಕ್ರಿಯಾಶೀಲವಾಗಿ ಮಾಡಲು ಇನ್ನೂ ಬಹಳ ಕೆಲಸ ಮಾಡಬೇಕಾಗಿದೆ. ಬ್ಯಾಂಕುಗಳ ರಾಷ್ಟ್ರೀಕರಣವಾದ ಮೇಲೆ ಶಾಖೆಯು ಬೆಳವಣಿಗೆ ಬಹಳ ಶೀಘ್ರದಲ್ಲಿ ಬೆಳೆಯುತ್ತಿದೆ. ಒಂದು ಅಂದಾಜಿನ ಪ್ರಕಾರ 1990ರ ವೇಳೆಗೆ ಠೇವಣಿ ರೂ. 50.000 ಕೋಟಿಯಾಗಿ ಶಾಖೆಗಳ ಸಂಖ್ಯೆ 55,000ದಿಂದ 60,000 ಆಗಿ ಸಿಬ್ಬಂದಿಯ ಸಂಖ್ಯೆ 9 ಲಕ್ಷ ಮುಟ್ಟಬಹುದು. ಇವರೆಲ್ಲರಿಗೂ ತರಬೇತಿ ಆವಶ್ಯಕ. ಇದು ಸಮಗ್ರ ಮತ್ತು ಪರಿಪೂರ್ಣವಾಗಿರಬೇಕು. ಸ್ವಲ್ಪಸ್ವಲ್ಪವಾಗಿ, ಅಂದರೆ ಚೂರುಚೂರು ತರಬೇತಿ, ಅದು ಎಷ್ಟು ಒಳ್ಳೆಯದಿದ್ದರೂ ಸರಿಯಾದ ಹೊಂದಾಣಿಕೆ ಇಲ್ಲದಿದ್ದರೆ ಮತ್ತು ಸಮಗ್ರವಾಗಿರದಿದ್ದರೆ ಪರಿಣಾಮಕಾರಿಯಾಗಿರುವುದಿಲ್ಲ. ಇದು ಒಂದು ಬಗೆಯ ಸಂಗೀತಗೋಷ್ಠಿಯಂತೆ, ನಾನಾ ವಾದ್ಯಗಳಿಂದ ಹೊರಡುವ ನಾದ ಸಮ್ಮಿಳನದಂತೆ. ತರಬೇತಿ ಸೂತ್ರದ ಪ್ರತಿಯೊಂದು ನಿಯಮವನ್ನೂ ಸರಿಯಾದ ರೀತಿಯಲ್ಲಿ ಮತ್ತು ಸರಿಯಾದ ಸಮಯದಲ್ಲಿ ಬಳಸುವುದರಿಂದ ಅದರ ಸಂಪೂರ್ಣ ಲಾಭ ಪಡೆಯಬಹುದು. ಆದುದರಿಂದ ತರಬೇತಿಯ ಸೂತ್ರಬದ್ಧವಾದ ಯೋಜನೆಯ ಕಡೆ ಗಮನ ಹರಿಸಬೇಕು.

### ಕೆಲವು ಊಹೆಗಳು

ನಾವು ತರಬೇತಿ ಸೂತ್ರಗಳನ್ನು ಚರ್ಚಿಸುವ ಮುಂಚೆ ಅದು ಯಾವುದನ್ನು ಅವಲಂಬಿಸಿದೆ ಎಂಬುದನ್ನು ಊಹಿಸೋಣ. ಈ ಊಹೆಗಳನ್ನು ಹೀಗೆ ಸಂಕ್ಷಿಪ್ತವಾಗಿ ಹೇಳಬಹುದು :

(1) ತರಬೇತಿಯಿಂದ ಕೆಲವು ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ನಿವಾರಿಸಬಹುದು.ಆದರೂ ವ್ಯವಸ್ಥಾಪನ ಕ್ರಿಯೆಗಳನ್ನು (ಮ್ಯಾನೇಜರಿಯಲ್ ಆಕ್ಷನ್) ಉಪಯೋಗಿಸುವ ಕಡೆ ಅನಾವಶ್ಯಕ ತರಬೇತಿಯನ್ನು ಬಳಸಬಾರದು.

(2) ತರಬೇತಿಯನ್ನು ವಿಶಾಲವಾದ ಅರ್ಥದಲ್ಲಿ ಗ್ರಹಿಸಬೇಕು. ಇದು ತರಗತಿಯಿಂದ ಹೊರಗಡೆ ಬರಬೇಕು. ಸಂಘಟಿತ ಪ್ರಯತ್ನದಿಂದ ಸಂಘ ಸಂಸ್ಥೆಗಳಲ್ಲಿ ಮಾನವ ಸಂಪನ್ಮೂಲಗಳನ್ನು ಅಭಿವೃದ್ಧಿಮಾಡಬೇಕು. ಕೆಲವು ಬ್ಯಾಂಕುಗಳು ಮಾನವ ಸಂಪನ್ಮೂಲದ ಅಭಿವೃದ್ಧಿಯನ್ನು ಒಪ್ಪಿಕೊಂಡಿವೆ. ತರಬೇತಿ ಮಾನವ ಸಂಪನ್ಮೂಲದ ಅಭಿವೃದ್ಧಿಯ ಒಂದು ಮುಖ್ಯವಾದ ಅಂಗ.

(3) ತರಬೇತಿಯನ್ನು ಮೇಲ್ಕಂಡ ಅರ್ಥದಲ್ಲಿ ಒಪ್ಪಿಕೊಂಡಿದ್ದೇ ಆದರೆ ಹೊಸ ಮಾರ್ಗಗಳಲ್ಲಿ ಜನರನ್ನು ಮತ್ತು ತಂಡಗಳನ್ನು ತರಬೇತಿ ಮಾಡಬೇಕಾಗುತ್ತದೆ. ಈಗಿನ ಕೆಲವು

---

ಹಿಂದಿನ ಪುಟದಿಂದ

ರಿಂದ ಸಂಬಂಧಪಟ್ಟ ಸರಕಾರಿ ನೌಕರರು ಮತ್ತು ಬ್ಯಾಂಕುಗಳು ಈ ದಿಸೆಯಲ್ಲಿ ತುಂಬ ಹೊಣೆಗಾರಿಕೆಯಿಂದ ಕೆಲಸ ಮಾಡಬೇಕು ಮತ್ತು ಎಚ್ಚರಿಕೆ ವಹಿಸಿ ಈ ಕಾರ್ಯಕ್ರಮವನ್ನು ಕೃತಿರೂಪಕ್ಕಿಳಿಸಬೇಕು.

ಒಟ್ಟಾರೆ ಹೇಳುವುದಾದರೆ, ಈ ಕಾರ್ಯಕ್ರಮ ಜನರಿಗಾಗಿ, ಜನರಿಂದಲೇ ನೆರವೇರಬೇಕು. ಕಡುಬಡತನ ಹೇಳಹೆಸರಿಲ್ಲದಂತೆ ಆಗಬೇಕು. ಕಡುಬಡವರು ದಾರಿದ್ರ್ಯರೇಖೆಯಿಂದ ಮೇಲೆ ಬರಬೇಕು. ಬಡತನದ ವಿರುದ್ಧ ರಕ್ತರಹಿತ ಕ್ರಾಂತಿಯಾಗಬೇಕು. ಹಳ್ಳಿಗಳ ಉದ್ಧಾರವೇ ದೇಶದ ಉದ್ಧಾರ. ಇದೊಂದು ರಾಷ್ಟ್ರೀಯ ಕಾರ್ಯಕ್ರಮ. ಇದು ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯ ಜವಾಬ್ದಾರಿ. ಈ ಜವಾಬ್ದಾರಿಯನ್ನು ಆತ್ಮವಿಶ್ವಾಸದಿಂದ ನಿಭಾಯಿಸಿದಾಗಲೇ ರಾಮರಾಜ್ಯದ ಕನಸು ನನಸಾಗುವುದು ಸಾಧ್ಯ.

ತೊಂದರೆಗಳನ್ನು, ಅಂದರೆ ತರಬೇತಿ ನಡೆಸುವ ಕಟ್ಟಡಗಳ ಕೊರತೆ ಮತ್ತು ಬಹಳ ಜನರು ತರಬೇತಿ ಕೇಂದ್ರಗಳಿಗೆ ಬಂದು ಹೋಗುವ ಅಂದರೆ ಪ್ರಯಾಣಮಾಡುವ ತೊಂದರೆ ನಮ್ಮ, ಕೆಲವು ನವೋನ್ಮೇಷ ವಿಧಾನಗಳಿಂದ ನಿವಾರಿಸಬಹುದು.

(4) ತರಬೇತಿ ವ್ಯವಸ್ಥೆಯಲ್ಲಿ ಪಾಠಗಳಿಗಿಂತ ಹೆಚ್ಚಾಗಿ ಉಪನ್ಯಾಸಕರು ಬದಲಾವಣೆಯ ಹರಿಕಾರರಾಗಿರುತ್ತಾರೆ. ಅವರ ಮುಖ್ಯಪಾತ್ರ–ಯೋಜನೆ, ಪ್ರೋತ್ಸಾಹಗಳು–ಬದಲಾವಣೆಯ ಗುರಿಮುಟ್ಟಿಸಲು ನೆರವಾಗುವುದು. ಅದರಿಂದ ಸಮಸ್ಯೆಗಳನ್ನು ಗುರ್ತಿಸುವುದು, ಪರಿಹಾರ ಹುಡುಕುವುದು ಮತ್ತು ಬೇರೆ ಸಮಾಧಾನಕರವಾದ ಉತ್ತರವನ್ನು ಕಂಡುಹಿಡಿಯುವುದು—ಇವು ಸಂಸ್ಥೆ ಒಪ್ಪಿಕೊಂಡಿರುವ ಸೂತ್ರಗಳನ್ನು ಕಾರ್ಯಗತಗೊಳಿಸಲು ಸಹಾಯ ಮಾಡುವುದು.

(5) ತರಬೇತಿ ಪರಿಣಾಮಕಾರಿಯಾಗಬೇಕಾದರೆ ಅದಕ್ಕೆ ಸಾಕಷ್ಟು ಗಮನ ನೀಡಬೇಕು ಮತ್ತು ತರಬೇತಿಗೆ ಸಂಬಂಧಪಟ್ಟವರು ಅದರ ಮೇಲೆ ಸಾಕಷ್ಟು ಹಿಡಿತ ಇಟ್ಟುಕೊಂಡಿರಬೇಕು ಮತ್ತು ಸಂಪ್ರದಾಯಬದ್ಧವಾದ ತರಬೇತಿ ಮುಂದೆ ಮಾಡಬೇಕಾದ ಕೆಲಸ ಮತ್ತು ಅನಂತರದ ಕ್ರಮ (ಫಾಲೋ ಅಪ್) ಇರಬೇಕು.

(6) ತರಬೇತಿಯ ಪ್ರಮುಖ ಹೊಣೆ ಸಿಬ್ಬಂದಿ ಮತ್ತು ತರಬೇತಿ ತಂಡದ ಮೇಲಿದ್ದರೂ ಎಲ್ಲಾ ಶಾಖೆಗಳ ವ್ಯವಸ್ಥಾಪಕರು ಹೊಣೆಯನ್ನು ಹಂಚಿಕೊಳ್ಳಬೇಕು.

(7) ತರಬೇತಿ ಸಾಕಷ್ಟು ಪರಿಣಾಮಕಾರಿಯಾಗಬೇಕಾದರೆ ಸಂಸ್ಥೆ ಸರಿಯಾದ ಗಮನ ನೀಡಬೇಕು. ತರಬೇತಿ ಪ್ರಮುಖ ಸ್ಥಾನವನ್ನು ಅಲಂಕರಿಸಬೇಕು. ಉನ್ನತ ಶ್ರೇಣಿಯ ಅಧಿಕಾರಿಗಳು ಈ ವಿಷಯದಲ್ಲಿ ಒಂದುಗೂಡಬೇಕು. ತರಬೇತಿದಾರರಿಗೆ ಸಂಪೂರ್ಣ ಅಧಿಕಾರ ಸ್ವಾಯತ್ತತೆ ಅಂತಸ್ತು ಕೊಡಬೇಕು.

## ತರಬೇತಿ ಸೂತ್ರದ ಸಾಮಾನ್ಯ ಲಕ್ಷಣಗಳು

ತರಬೇತಿ ವಿಭಾಗ ವಿಶಾಲವಾದ ಮತ್ತು ಹೆಚ್ಚಿನ ಕ್ರಿಯಾತ್ಮಕ ದೃಷ್ಟಿಯನ್ನು ತರಬೇತಿ ಬಗ್ಗೆ ಹೊಂದಬೇಕಾಗಿದೆ. 15 ವರ್ಷಗಳ ಹಿಂದೆ ಡಾ॥ ರಾಲ್ಫ ಲಿಂಟಂಗ್ ಮತ್ತು ಉದಯ ಪರೀಖ್‌ರವರು ತರಬೇತಿ ಸೂತ್ರದ ಸುರಳಿ ಮಾದರಿಯನ್ನು (ಸ್ಪೈರಲ್ ಮಾಡೆಲ್) ಸೂಚಿಸಿದರು. ಇದು ಮುಖ್ಯವಾಗಿ ತರಬೇತಿ ಪೂರ್ವ, ತರಬೇತಿ ಮತ್ತು ತರಬೇತಿಯ ಅನಂತರದ ಕ್ರಮಗಳು. ಇತ್ತೀಚೆಗೆ ಡಾ॥ ರಾವ್ ಮತ್ತು ಉದಯ ಪರೀಖ್ ಅವರು ತರಬೇತಿ ವಿಧಾನ ನಾಲ್ಕು ಕ್ಷೇತ್ರಗಳಿಗೆ ಗಮನ ಹರಿಸಬೇಕು ಎಂದಿದ್ದಾರೆ. ಅವುಗಳೆಂದರೆ ತರಬೇತಿ ಸಂಸ್ಥೆ ಮತ್ತು ಕೆಲಸಮಾಡುವ ಸಂಸ್ಥೆಯ ನಡುವೆ ಬಲವಾದ ಕೊಂಡಿ,ಅವರುಗಳ ತಾದಾತ್ಮ್ಯ, ತರಬೇತಿ ಪೂರ್ವ ಕ್ರಮಗಳು (ಗುರಿಯನ್ನು ಗುರ್ತಿಸುವುದು, ಅಭ್ಯರ್ಥಿಗಳ ಆಯ್ಕೆ,ತರಬೇತಿ ಪೂರ್ವ ಪ್ರೇರೇಪಣೆ), ತರಬೇತಿಯ ನೆಲೆ ಮತ್ತು ಅನಂತರದ ಕ್ರಮಗಳು.

ತರಬೇತಿ ಸೂತ್ರ ವಿಶಾಲವಾದ ದೃಷ್ಟಿಕೋನವನ್ನು ಹೊಂದಬೇಕಾಗುತ್ತದೆ. ಸೂತ್ರಗಳನ್ನು ಯೋಜನೆಗೊಳಿಸುವಲ್ಲಿ ಮೂರು ಹಂತಗಳನ್ನು ಗುರ್ತಿಸಬಹುದು. ಸಂಪೂರ್ಣ ಬ್ಯಾಂಕಿಂಗ್ ಕ್ಷೇತ್ರದ ಈ ಜಾಲ ಬಂಧಕ್ಕೆ ಹೆಚ್ಚಿನ ಗಮನ ಹರಿಸಬೇಕು. ಬ್ಯಾಂಕುಗಳ ನಡುವೆ ತರಬೇತಿ ವಿಧಾನಗಳಿಗೆ ಸಂಬಂಧ ಕಲ್ಪಿಸಬೇಕು. ಹಲವು ಬ್ಯಾಂಕುಗಳು ಸ್ವಯಂ ಪರಿಪೂರ್ಣ ತರಬೇತಿ ಕೇಂದ್ರಗಳನ್ನು ಹೊಂದುವ ಸಾಮರ್ಥ್ಯ ಹೊಂದಿವೆ. ಆದರೂ ಇವು ಜೊತೆಗೂಡಿ ಕೆಲಸಮಾಡುತ್ತಿಲ್ಲ. ಇವನ್ನು ಜೊತೆಗೂಡಿಸಬೇಕಾಗಿದೆ. ಈ ದಿಸೆಯಲ್ಲಿ ಕೆಲವು ಒಳ್ಳೆಯ ಪ್ರಯತ್ನಗಳನ್ನು ಮಾಡಲಾಗಿದೆ.

ಬ್ಯಾಂಕಿನ ಮಟ್ಟದಲ್ಲಿ ತರಬೇತಿ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಹೆಚ್ಚಿನ ಗಮನ ಕೊಡಬೇಕಾಗುತ್ತದೆ. ಅದರಲ್ಲಿ ಪ್ರಮುಖವಾಗಿ ತರಬೇತಿ ಸಂಸ್ಥೆಯ ಸ್ಥಾನ, ಅದರ ರಚನೆ, ಕಾರ್ಯವಿಧಾನ, ಅದರ ಸಂಸ್ಕೃತಿ.

ತರಬೇತಿ ವ್ಯವಸ್ಥೆಯ ಮಟ್ಟದಲ್ಲಿ ಯೋಜನಾಬದ್ಧವಾಗಿ ಮಾನವ ಸಂಪನ್ಮೂಲಗಳ ಗುಣಮಟ್ಟವನ್ನು ಹೆಚ್ಚಿಸುವಲ್ಲಿ ಪ್ರಯತ್ನ ನಡೆದಿವೆ. ಅದರಲ್ಲಿ ತರಬೇತಿಯ ಅವಶ್ಯಕತೆಯನ್ನು ಗುರ್ತಿಸುವುದೂ ತರಬೇತಿಯ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವುದೂ ಉಂಟು.

## ತರಬೇತಿ ಜಾಲ

ಪ್ರಪಂಚದಲ್ಲಿ ಸಿಗುವ ಯಾವುದೇ ಬ್ಯಾಂಕುಗಳಿಗಿಂತ ಹೆಚ್ಚಿನ ಆಧುನಿಕ ವಿಧಾನಗಳಿಂದ ಕೂಡಿದ ತರಬೇತಿ ಕ್ರಮಗಳನ್ನು ಭಾರತೀಯ ಬ್ಯಾಂಕುಗಳು ಹೊಂದಿವೆ ಎಂದರೆ ಅತಿಶಯೋಕ್ತಿಯಲ್ಲ. ಆದರೂ ಪ್ರತಿ ಬ್ಯಾಂಕಿನಿಂದಲೂ ಕಲಿಯುವ ವಿಷಯ ಅಷ್ಟೇನೂ ಇಲ್ಲ. ಅತಿ ದೊಡ್ಡ ಬ್ಯಾಂಕಾದ ಭಾರತೀಯ ಸ್ಟೇಟ್ ಬ್ಯಾಂಕು ತನ್ನ ಬೇರೆ ಬೇರೆ ವಲಯಗಳಿಂದ ವಿಚಾರ ವಿನಿಮಯ ಮಾಡಿಕೊಳ್ಳಬೇಕು. ತರಬೇತಿಯ ವಿಷಯದಲ್ಲಿ ಬ್ಯಾಂಕುಗಳ ಸಮ್ಮಿಳನಕ್ಕಾಗಿ ಬ್ಯಾಂಕು ವ್ಯವಸ್ಥಾಪನೆಯ ರಾಷ್ಟ್ರೀಯ ಸಂಸ್ಥೆ (ಎನ್.ಐ.ಬಿ.ಎಮ್), ಭಾರತೀಯ ರಿಸರ್ವ್ ಬ್ಯಾಂಕು ಮತ್ತು ಭಾರತ ಬ್ಯಾಂಕು ಸಂಘ ಇವುಗಳ ಪ್ರಯತ್ನ ನಡೆದಿದೆಯಾದರೂ ಅದು ಪರಿಣಾಮಕಾರಿಯಾಗಿಲ್ಲ. ಬ್ಯಾಂಕುಗಳನ್ನು ಒಂದುಗೂಡಿಸುವ ಹೊಣೆಗಾರಿಕೆಯನ್ನು ಬ್ಯಾಂಕು ತಾನೇ ಹೊರಬೇಕಾಗಿದೆ. ಇದರ ಮೂಲ ಉದ್ದೇಶ ವಿಚಾರ, ಅನುಭವ, ಪದ್ಧತಿಗಳ ವಿನಿಮಯ.

ಕೆಲವು ಬ್ಯಾಂಕುಗಳನ್ನು ಒಂದುಗೂಡಿಸಿ ಬ್ಯಾಂಕಿಂಗ್ ತರಬೇತಿ ಜಾಲವನ್ನು ಮಾಡುವುದು ಒಳ್ಳೆಯದು. ಜಾಲದ ಸಂಘಟನೆಯ ಹೊಣೆಗಾರಿಕೆಯನ್ನು ಎರಡು ಅಥವಾ ಮೂರು ವರ್ಷಗಳ ಅವಧಿಯಂತೆ ಬ್ಯಾಂಕುಗಳಿಗೆ

ಕೊಡಬೇಕು. ಕೆಳಕಂಡ ಮೂರು ಪ್ರಮುಖ ಚಟುವಟಿಕೆಗಳನ್ನು ಈ ಜಾಲ ತೆಗೆದುಕೊಳ್ಳಬಹುದು.

1 **ಪತ್ರಿಕೆಗಳನ್ನು ಪ್ರಕಟಿಸುವುದು :** ಪತ್ರಿಕೆಗಳನ್ನು ತ್ರೈಮಾಸಿಕವಾಗಿ ಪ್ರಾರಂಭಿಸಿ ಆಮೇಲೆ ಎರಡು ತಿಂಗಳಿಗೊಮ್ಮೆ ಪ್ರಕಟಿಸಬೇಕು. ಸಾಕಷ್ಟು ಲೇಖನಗಳು ಬಂದರೆ ಮಾಸಿಕವಾಗಿ ಪರಿವರ್ತಿಸಬೇಕು. ಪತ್ರಿಕೆಗೆ "ಬ್ಯಾಂಕುಗಳಲ್ಲಿ ತರಬೇತಿ" ಎಂಬ ಹೆಸರನ್ನು ಇಡಬೇಕು. ತರಬೇತಿಯಲ್ಲಿ ಬ್ಯಾಂಕುಗಳ ಅನುಭವ, ಕಾರ್ಯಕ್ರಮಗಳು, ಹೊಸ ವಿಧಾನ, ಮೌಲ್ಯಾಂಕನ ಪ್ರಬಂಧಗಳು, ವಿವಿಧ ಬ್ಯಾಂಕುಗಳು ನೀಡುತ್ತಿರುವ ತರಬೇತಿ—ಇವುಗಳ ಬಗ್ಗೆ ಅನುಭವಪೂರ್ಣ ಪ್ರಬಂಧಗಳನ್ನು ಪ್ರಕಟಿಸಬೇಕು. ಈ ಬಗೆಯ ಪತ್ರಿಕೆ ಉನ್ನತಮಟ್ಟದ್ದಾಗಿರಬೇಕು. ಅದರ ಸಂಪಾದಕತ್ವದ ಹೊಣೆಯನ್ನು ನುರಿತ ವೃತ್ತಿಗಾರರಿಗೆ ಕೊಡುವುದು ಒಳ್ಳೆಯದು.

2 **ವಾರ್ಷಿಕ ಸಮ್ಮೇಳನ :** ವಾರ್ಷಿಕ ವಿದ್ಯುಕ್ತ ಸಭೆಯನ್ನು ಏರ್ಪಡಿಸಿ ಎಲ್ಲಾ ಬ್ಯಾಂಕುಗಳ ತರಬೇತಿದಾರರನ್ನು ಕರೆಯಿಸುವುದು ವೃತ್ತಿದಾರರ ಸಂಬಂಧಗಳ ಬೆಸುಗೆ ಮಾಡಿದಂತಾಗುತ್ತದೆ. ಸಮ್ಮೇಳನದಲ್ಲಿ ಹೊಸ ಯೋಜನೆಗಳ ಚರ್ಚೆ, ಹೊಸ ತರಬೇತಿ ವಿಧಾನಗಳ ಬೆಳವಣಿಗೆಯ ಮಾದರಿಗಳನ್ನು ಪ್ರದರ್ಶಿಸಬಹುದು.

3 **ತೀರುವೆ ಮನೆ :** ಬ್ಯಾಂಕುಗಳ ಉಪಯೋಗಕ್ಕಾಗಿ ಸಿಗುವ ತರಬೇತಿ ಸಾಮಗ್ರಿ, ಪತ್ರಿಕೆ, ಪುಸ್ತಕ, ನಾನಾ ತರಬೇತಿ ಕೇಂದ್ರಗಳ ಮಾಹಿತಿ ಮುಂತಾದವುಗಳನ್ನು ತೀರುವೆ ಮನೆಯ ಮೂಲಕ ತಿಳಿಸಬೇಕು. ಈ ಸುದ್ದಿ ಜಾಲದ ಮೂಲಕವಾಗಿ ಕಾಲಕಾಲಕ್ಕೆ ಸದಸ್ಯ ಬ್ಯಾಂಕುಗಳಿಗೆ ತಿಳುವಳಿಕೆ ನೀಡಬೇಕು.

### ತರಬೇತಿ ಪದ್ಧತಿ

ಬ್ಯಾಂಕಿನ ಮಟ್ಟದಲ್ಲಿ ಈ ಸೂತ್ರ ಸರಿಯಾದ ತರಬೇತಿ ಪದ್ಧತಿಯನ್ನು ರಚಿಸಿ ಪ್ರಾರಂಭಿಸಬೇಕು. ಹಿರಿಯ ವ್ಯವಸ್ಥಾಪಕ ಶ್ರೇಣಿಯ ಗಮನಕ್ಕೆ ಈ ತರಬೇತಿ ವ್ಯಾಪ್ತಿ ಬರಬೇಕು. ಕೆಲವು ಬ್ಯಾಂಕುಗಳಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿಯು ತರಬೇತಿಯನ್ನು ಒಳಗೊಂಡಿದೆ. ಆದರೆ ಮಾ. ಸಂ. ಅ. ತರಬೇತಿಯು ಒಂದು ಅಂಗ. ಆದುದರಿಂದ ತರಬೇತಿ ಪದ್ಧತಿಗೆ ವಿಶೇಷ ಗಮನ ನೀಡಬೇಕು. ತರಬೇತಿಯ ಸಂಪೂರ್ಣ ಚಿತ್ರಣವನ್ನು ರೂಪಿಸುವುದು, ಸಂಘಟನೆ ಮಾಡುವುದು, ಸಲಹೆ ಕೊಡುವುದನ್ನು ಬ್ಯಾಂಕುಗಳು ಮಾಡಬೇಕು.

ಪ್ರಮುಖ ಹೊಣೆಗಾರಿಕೆಯನ್ನು ಹೊತ್ತ ತರಬೇತಿ ಸಂಸ್ಥೆಗಳಿಗೆ ಸ್ವಯಂ ಆಡಳಿತ ಮತ್ತು ಸಾಕಷ್ಟು ಸಂಪನ್ಮೂಲಗಳನ್ನು ಕೊಡಬೇಕು. ಪರಿಣಾಮಕಾರಿಯಾದ ಫಲಿತಾಂಶಕ್ಕೆ ಅವರನ್ನು ಹೊಣೆಗಾರರನ್ನಾಗಿ ಮಾಡಬೇಕು. ಬ್ಯಾಂಕಿನ ಸಮಸ್ಯೆಗಳನ್ನು ನಿವಾರಿಸಲು ಮತ್ತು ಸಂಸ್ಥೆಯ ಬೆಳವಣಿಗೆಗೆ ಸಹಾಯಕವಾಗಿ ಇರಬೇಕು. ಬ್ಯಾಂಕುಗಳ ಬೇರೆ ಬೇರೆ ಹಂತಗಳಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ತರಬೇತಿ ಕೇಂದ್ರಕ್ಕೆ ಕಳುಹಿಸಬೇಕು. ಪರಿಣತರ ಸಲಹೆ ಮತ್ತು ಫಲಿತಾಂಶಗಳನ್ನು ಬ್ಯಾಂಕಿನಲ್ಲಿ ಸರಿಯಾಗಿ ಅಳವಡಿಸಬೇಕು. ಬ್ಯಾಂಕಿನ ವಿವಿಧ ಕ್ಷೇತ್ರಗಳಲ್ಲಿ ಈ ತರಹದ ಪ್ರಯೋಗದ ಅನುಭವವಿಲ್ಲದೆ ಇದ್ದರೆ ತರಬೇತಿಯಿಂದ ಪ್ರಯೋಜನವಾಗುವುದಿಲ್ಲ. ತರಬೇತಿ ಕೇಂದ್ರದ ಸಿಬ್ಬಂದಿಯವರು ಹೊಸ ಹೊಸ ಪ್ರಯೋಗ ತಂತ್ರಗಳನ್ನು ತಿಳಿದುಕೊಂಡಿರಬೇಕು. ಅದರ ಸಂಪೂರ್ಣ ಸೇವೆಯನ್ನು ಬ್ಯಾಂಕು ಪಡೆದುಕೊಳ್ಳಬೇಕು. ತರಬೇತಿ ಸಂಸ್ಥೆಯನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯೆಂದು ಹೆಸರಿಸಬೇಕು. ಅದರಿಂದ ಅವರು ಹೆಚ್ಚಿನ ಜವಾಬ್ದಾರಿ ತೆಗೆದುಕೊಳ್ಳಲು ಮತ್ತು ಮಾನವ ಸಂಪನ್ಮೂಲಗಳನ್ನು ಬೆಳೆಸಲು ಸಹಾಯವಾಗುತ್ತದೆ.

ಈ ತರಹದ ಜವಾಬ್ದಾರಿಯನ್ನು ಕೊಟ್ಟ ಮೇಲೆ ಅವರಿಗೆ ಆವಶ್ಯಕವಾದ ಪರಿಪೂರ್ಣ ಸಿಬ್ಬಂದಿ, ಪುಸ್ತಕಗಳು, ಪತ್ರಿಕೆಗಳು, ತರಬೇತಿ ಸಾಮಗ್ರಿಗಳು ಮುಂತಾದವುಗಳನ್ನು ತಪ್ಪದೇ ಒದಗಿಸಬೇಕು. ಸಿಬ್ಬಂದಿಗೆ ಸಾಕಷ್ಟು ಕಾಲಾವಕಾಶ ಮುಖ್ಯ. ಇದು ಯೋಜನೆಗಳನ್ನು ಸಿದ್ಧಪಡಿಸಲು ಅವಶ್ಯಕ.

ತರಬೇತಿ ಸಂಸ್ಥೆಗಳನ್ನು ರೂಪಿಸುವಲ್ಲಿ ವಿಶೇಷ ಗಮನ ನೀಡಬೇಕು. ತರಬೇತಿ ಸಂಸ್ಥೆಗಳಿಗೆ ಸರಿಯಾಗಿ ಹೊಂದುವ ವ್ಯವಸ್ಥೆಯೆಂದರೆ ಮಾತೃಕೆ ಸಂರಚನೆ (ಮ್ಯಾಟ್ರಿಕ್ಸ್ ಸ್ಟ್ರಕ್ಚರ್).

ಸಾಮಾನ್ಯವಾಗಿ ತರಬೇತಿ ಕೇಂದ್ರಗಳಿಗೆ ಹಲವಾರು ತರಹದ ತರಬೇತಿ ನಡೆಸಲು ಅನುಮತಿ ಇರುತ್ತದೆ. ತರಬೇತಿ ನಡೆಸುವ ವಿಷಯಗಳನ್ನು ಮುಂಚೆಯೇ ಶಾಖೆಗಳಿಗೆ ತಿಳಿಸಲಾಗುತ್ತದೆ. ಗೊತ್ತಾದ ದಿನಗಳಲ್ಲಿ ಅಭ್ಯರ್ಥಿಗಳನ್ನು ತರಬೇತಿ ಕೇಂದ್ರಕ್ಕೆ ಕಳುಹಿಸಬೇಕು. ಆದರೆ ಹಲವಾರು ಬಾರಿ ಅಭ್ಯರ್ಥಿಗಳು ಕೇಂದ್ರಕ್ಕೆ ಬರುವುದೇ ಇಲ್ಲ. ಸಾಮಾನ್ಯವಾಗಿ ಕೇಂದ್ರದ ಪ್ರಾಂಶುಪಾಲರು ಖಾಲಿಯಾದ ಸ್ಥಾನಗಳನ್ನು ಇತರ ಅಭ್ಯರ್ಥಿಗಳನ್ನು ಕರೆಸುವ ಮೂಲಕ ಭರ್ತಿ ಮಾಡಿಕೊಳ್ಳಬೇಕಾಗುತ್ತದೆ. ವಲಯ ಅಧಿಕಾರಿಗಳನ್ನು ಅಥವಾ ಪ್ರಾದೇಶಿಕ ಕಛೇರಿಗಳಲ್ಲಿ ಅಭ್ಯರ್ಥಿಗಳನ್ನು ಬೇಡುವ ಸಂದರ್ಭಗಳು ಉಂಟು. ಹೀಗೆ ಏಕೆ ? ಅಭ್ಯರ್ಥಿಗಳಿಗೆ ಬರಲು ಇಷ್ಟವಿಲ್ಲವೆ ? ಅಥವಾ ಶಾಖೆಯಿಂದಲೇ ಕಳುಹಿಸುವುದಿಲ್ಲವೆ ? ತರಬೇತಿ ಸಾಕಷ್ಟು ಆಕರ್ಷಕವಾಗಿರಬೇಕು. ತರಗತಿಯಲ್ಲಿ ಭೈರಿಗೆಯಾಗುತ್ತವೆ ಎಂಬ ಭಾವನೆ ಬರಕೂಡದು. ತರಬೇತಿಗೆ ಸೂಚನೆ ಬಂದರೆ ಯಾರೂ ತಪ್ಪಿಸಿಕೊಳ್ಳದ ಹಾಗೆ ಕಾರ್ಯಕ್ರಮ ರೂಪಿಸಿ ಅದನ್ನು ಆಕರ್ಷಕವಾಗಿ ಮಾಡಬೇಕು. ಕೇಂದ್ರದ ಖರ್ಚುಗಳನ್ನು ಲೆಕ್ಕ ಹಾಕಿ, ಆ ಖರ್ಚುಗಳನ್ನು ಆಯಾ ಶಾಖೆ ಭರಿಸುವಂತಾಗಬೇಕು. ತರಬೇತಿ ಕೇಂದ್ರ ಲಾಭ ಮಾಡುವುದಂತೂ ಆಗುವುದಿಲ್ಲ. ಆದರೆ ನಷ್ಟವಾಗಬಾರದು. ಇಂಥ ಪದ್ಧತಿಯನ್ನು ಪ್ರಾಯೋಗಿಕವಾಗಿ ಎರಡು ಅಥವಾ ಮೂರು ಬ್ಯಾಂಕುಗಳಲ್ಲಿ ಆಚರಣೆಗೆ ತರಬೇಕು. ಪ್ರಾರಂಭದಲ್ಲಿ ಇದರ

ಕಾರ್ಯಾಚರಣೆಯನ್ನು ಗಮನಿಸಿ, ಇದರ ಸೇವೆಗಳನ್ನು ಹೊರಗಣ ಇತರ ಸಂಸ್ಥೆಗಳಲ್ಲಿ ಮಾಡುವ ಸಂಭವವನ್ನು ಅನಂತರ ಪರಿಶೀಲಿಸಬಹುದು.

**ತರಬೇತಿಯ ಅವಶ್ಯಕತೆಗಳು**

ತರಬೇತಿಯ ಸೂತ್ರ ನಿಜವಾಗಿಯೂ ಪ್ರಾರಂಭವಾಗುವುದು ತರಬೇತಿಯ ಅವಶ್ಯಕತೆಯನ್ನು ಅಂದಾಜು ಮಾಡುವುದರೊಂದಿಗೆ. ಸಾಮಾನ್ಯವಾಗಿ ತರಬೇತಿ ವಿವಿಧ ಕ್ಷೇತ್ರಗಳ ಸಿಬ್ಬಂದಿಗಳಿಗೆ ಮಾಡಲಾಗುವುದು. ಉದಾಹರಣೆಗೆ, ಗ್ರಾಮೀಣ ವ್ಯವಸ್ಥಾಪಕರಿಗೆ, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಗೆ ಕೃಷಿ ಅಧಿಕಾರಿಗಳಿಗೆ—ಹೀಗೆ. ಸಂಸ್ಥೆಯ ಪೂರ್ತಿ ಅವಶ್ಯಕತೆಯನ್ನು ಅಂದಾಜು ಮಾಡಬೇಕಾಗಿದೆ. ವಲಯ ಕಛೇರಿ, ಪ್ರಾದೇಶಿಕ ಕಛೇರಿ ಹೀಗೆ ಎಲ್ಲಾ ಕಡೆಯಿಂದ ಅಂದಾಜು ಮಾಡಬೇಕು. ಉದಯ ಪರೀಖ್ ಅವರು ಇದಕ್ಕೆ ಪಾತ್ರ ವಿಶ್ಲೇಷಣೆ (ರೋಲ್ ಅನಾಲಿಸಿಸ್) ಎಂಬ ಹೊಸ ವಿಧಾನವನ್ನು ಸೂಚಿಸಿದ್ದಾರೆ. ಅಂದರೆ ತರಬೇತಿಯ ಅವಶ್ಯಕತೆಯನ್ನು ಗುರ್ತಿಸುವುದು. ತರಬೇತಿಯ ಅವಶ್ಯಕತೆ ಯಾವುದು ಎಂದು ಪ್ರಾದೇಶಿಕ ಕಛೇರಿ ಕಂಡುಹಿಡಿಯುತ್ತದೆ. ಪ್ರತಿಯೊಂದು ಸಿಬ್ಬಂದಿಯನ್ನೂ ಶಕ್ತಿಯುತವಾದ್ದನ್ನಾಗಿ ಮಾಡುವುದು ಈ ಸೂತ್ರದ ಉದ್ದೇಶ. ಒಳ್ಳೆಯ ತಾಂತ್ರೀಕೃತ ವಿಧಾನಗಳ ಅಳವಡಿಕೆ. ಉದಾಹರಣೆಗೆ ಕಾರ್ಯಪಾಲನ ವರದಿಯ ವಿಶ್ಲೇಷಣೆ. ಸಮಸ್ಯೆಗಳ ವಿಶ್ಲೇಷಣೆ. ಕಮ್ಮಟಗಳ ವಿಶ್ಲೇಷಣೆ, ಇವುಗಳ ತೀರ್ಮಾನ ಮತ್ತು ವರದಿ.

**ತರಬೇತಿ ಸಂಪನ್ಮೂಲಗಳು**

ಸಂಪನ್ಮೂಲಗಳ ಅಭಿವೃದ್ಧಿ, ತರಬೇತಿ ಸೂತ್ರದ ಪ್ರಮುಖ ಪಾತ್ರ. ಹಲವಾರು ಬ್ಯಾಂಕುಗಳು ಇದರಲ್ಲಿ ಸಮೃದ್ಧಿಯಾದ ಜ್ಞಾನ ಹೊಂದಿವೆ. ಮುಖ್ಯವಾಗಿ ಭಾರತೀಯ ಸ್ಟೇಟ್ ಬ್ಯಾಂಕು ಉನ್ನತವಾದ ತಾಂತ್ರಿಕ ಜ್ಞಾನ ಸಂಪಾದಿಸಿದೆ.

ತರಬೇತಿ ಕೇಂದ್ರಕ್ಕೆ ಅಧ್ಯಾಪಕರುಗಳನ್ನು ಆಡಳಿತ ಕಛೇರಿ ಮೊದಲು ಸರಿಯಾಗಿ ಕಳುಹಿಸುತ್ತಿರಲಿಲ್ಲ. ಯಾರು ಶಾಖೆಯಲ್ಲಿ ಸರಿಯಾಗಿ ವ್ಯವಸ್ಥೆ ಮಾಡಲು ವಿಫಲರಾಗಿದ್ದಾರೋ, ಮತ್ತು ಯಾರಿಗೂ ಆ ಅಧಿಕಾರಿ ಬೇಡವೆಂದು ತೀರ್ಮಾನವಾಗಿರುತ್ತದೋ ಅವರನ್ನು ತರಬೇತಿ ಕೇಂದ್ರಕ್ಕೆ ಅಧ್ಯಾಪಕರು ಎಂದು ಕಳುಹಿಸಲಾಗುತ್ತಿತ್ತು. ಅಂದರೆ ತರಬೇತಿ ಕೇಂದ್ರ ಒಂದು ತಿರಸ್ಕರಿಸಲ್ಪಟ್ಟ ವಿಭಾಗವಾಗಿತ್ತು. ಆದರೆ ಈಗ ಆ ಮನೋಭಾವ ಸಂಪೂರ್ಣ ಬದಲಾಗಿದೆ. ವಿಶೇಷ ಪರಿಣತಿ ಹೊಂದಿರುವ ಪ್ರತಿಭಾವಂತರನ್ನು ಮಾತ್ರ ಈಗ ಕಳುಹಿಸಲಾಗುತ್ತಿದೆ. ತರಬೇತಿದಾರರಿಗೆ ಸಹ ಇದು ಒಳ್ಳೆಯ ಅವಕಾಶ. ಇವರು ಕೆಲವು ವರ್ಷಗಳಾದ ಮೇಲೆ ನಿರ್ವಹಣ ವಿಭಾಗದಲ್ಲಿ ಒಳ್ಳೆಯ ಪಾತ್ರವನ್ನು ತೆಗೆದುಕೊಳ್ಳಬಹುದು. ತರಬೇತಿದಾರರಾಗಿ ಕೆಲವಾರು ವರ್ಷ ಕೆಲಸ ಮಾಡಿದ್ದೇ ಆದರೆ ಮಾತ್ರ ಅವರಿಂದ ತರಬೇತಿಯ ಮೇಲೆ ಸ್ವಲ್ಪವಾದರೂ ಪರಿಣಾಮ ಆಗಬಹುದು. ಕ್ರಮಬದ್ಧವಾಗಿ ಮೂರರಿಂದ ಐದು ವರ್ಷಗಳ ತರಬೇತಿ ತಂತ್ರಗಳ ಮೂಲಕ ತರಬೇತಿ ಸಂಪನ್ಮೂಲ ಅಭಿವೃದ್ಧಿಗಳನ್ನು ಉಪಯೋಗಿಸಿಕೊಳ್ಳಲು ಒಳಗಿನ ಮತ್ತು ಹೊರಗಿನ ಅನುಕೂಲಗಳನ್ನು ಬಳಸಿಕೊಳ್ಳಬೇಕು. ಕೆಲವು ಬ್ಯಾಂಕುಗಳ ಅನುಭವಗಳನ್ನು ಹಂಚಿಕೊಳ್ಳಬೇಕು. ಕೆಲವು ಬ್ಯಾಂಕುಗಳ ಒಕ್ಕೂಟದಿಂದ ಬ್ಯಾಂಕುಗಳಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಅಥವಾ ತರಬೇತಿಗಳನ್ನು ಬೆಳೆಸಲು ಒಂದು ಸರ್ದಿಷ್ಟಯೋಜನೆ ಆವಶ್ಯಕ.

**ತರಬೇತಿ ಪದ್ಧತಿಗಳು**

ತರಬೇತಿ ತಂತ್ರದ ಬೆಳವಣಿಗೆಯ ಕಡೆಗೆ ಬಹಳ ಕಡಿಮೆ ಗಮನ ಹರಿಸಲಾಗಿದೆ. ತರಬೇತಿ ಸೂತ್ರ ಮತ್ತು ಕ್ರಮಗಳನ್ನು ರೂಪಿಸಲು ಅಧ್ಯಾಪಕರುಗಳಿಗೆ ಬಿಡಲಾಗುತ್ತಿದೆ. ದೂರದ ತರಬೇತಿಯನ್ನು (ಡಿಸ್ಟೆಂಟ್ ಟ್ರೈನಿಂಗ್) ಬ್ಯಾಂಕುಗಳಲ್ಲಿ ಸಂಪೂರ್ಣವಾಗಿ ಕೈಬಿಡಲಾಗಿದೆ. ಈ ಮೂಲಕ ಬ್ಯಾಂಕರನಿಗೆ ಸ್ಥಳದಲ್ಲಿಯೇ ತರಬೇತಿ ನೀಡಬಹುದು. ಇದರಿಂದ ಅಮೂಲ್ಯವಾದ ವೇಳೆ ಮತ್ತು ಸಮಯವನ್ನು ಉಳಿಸಬಹುದು. ತರಬೇತಿ ಕ್ರಮಗಳನ್ನು ತರಬೇತಿ ಸೂತ್ರದ ಭಾಗ ಎಂದು ಯೋಜಿಸಿದ್ದೇ ಆದರೆ ತರಬೇತಿ ವ್ಯವಸ್ಥೆ ಮತ್ತು ತರಬೇತಿ ಜಾಲವಿನ್ಯಾಸದಲ್ಲಿ ಪರಿಣಾಮಕಾರಿಯಾದ ಬದಲಾವಣೆಗಳಾಗಬಹುದು. ಈ ಪದ್ಧತಿಗಳಿಗೆ ಹೊಸ ವಿಭಾಗಗಳನ್ನು ತೆರೆಯಬೇಕಾಗುತ್ತದೆ. ಉದಾಹರಣೆಗೆ ದೂರದ ತರಬೇತಿ, ವ್ಯವಸ್ಥೆಯ ಬೆಳವಣಿಗೆ. ತರಬೇತಿ ಸಮಸ್ಯೆಗಳು ಮತ್ತು ತರಬೇತಿ ಜ್ಞಾನ, ಇತ್ಯಾದಿ.

**ತರಬೇತಿ ರಚನಾಕ್ರಮ**

ತರಬೇತಿ ಸೂತ್ರದ ತಿರುಳು ತರಬೇತಿಯ ರಚನಾಕ್ರಮವನ್ನು ಸಿದ್ಧಪಡಿಸುವುದು. ನಾವು ಸಿಬ್ಬಂದಿಯನ್ನು ಯಾವುದಕ್ಕಾಗಿ ತರಬೇತು ಮಾಡುತ್ತೇವೆ ಎಂಬುವನ್ನು ನಿರ್ಣಯಿಸಿಕೊಳ್ಳುವುದು ಒಳ್ಳೆಯದು. ಜನರನ್ನು ತರಬೇತಿಗಾಗಿ ಹೇಗೆ ಗುರ್ತಿಸಬೇಕು ? ಅವರ ಕಾರ್ಯ ನಿರ್ವಹಣೆಯ ಆಧಾರದ ಮೇಲೆಯೆ ? ಅದರ ಒಳಿತೆ ಕೆಡುಕೆ ? ವರದಿ ಮಾಡುವ ಅಧಿಕಾರಿಗಳ ಶಿಪಾರ್ಸಿನಿಂದಲೇ ? ಅಥವಾ ವೈಯಕ್ತಿಕವಾದ ಬೇಡಿಕೆಯಿಂದಲೇ? ಎಲ್ಲಿಯ ತನಕ ಅವರಿಗೆ ತರಬೇತಿ ಕೊಡಬೇಕು ? ಒಮ್ಮೆ ಎಷ್ಟು ಜನರಿಗೆ ? (ಅನುಭವದ ಪ್ರಕಾರ ಒಬ್ಬರಿಗೆ ಅಥವಾ ಇಬ್ಬರಿಗೆ ಕೊಟ್ಟ ತರಬೇತಿ ಪರಿಣಾಮಕಾರಿಯಾಗಿಲ್ಲ) ಯಾವ ಸಂಯೋಜನೆಯಲ್ಲಿ (ಕೆಲವು ಸಂದರ್ಭದಲ್ಲಿ ನೌಕರರ ತರಬೇತಿಯನ್ನು ಎರಡು ಅಥವಾ ಮೂರು ಕಂತುಗಳಲ್ಲಿ ಒಂದಾದ

ಮೇಲೊಂದರಂತೆ ಕೊಡುವುದರಿಂದ ಒಳ್ಳೆಯ ಪರಿಣಾಮ ಬಂದಿದೆ). ಇಂಥ ಪ್ರಶ್ನೆಗಳು ಪರಿಶೀಲನಾರ್ಹ.

**ತರಬೇತಿಗೆ ಬೆಂಬಲ**

ತರಬೇತಿಯನ್ನು ಹೇಗೆಂದು ಗ್ರಹಿಸಿದ್ದೇವೆ, ಹೇಗೆ ಬಳಸಿದ್ದೇವೆ ಮತ್ತು ಅವಲಂಬಿಸಿದ್ದೇವೆ ಎಂಬುದನ್ನೇ ತರಬೇತಿಯ ಪರಿಣಾಮ ಸ್ವಲ್ಪಮಟ್ಟಿಗೆ ಅವಲಂಬಿಸಿದೆ. ತರಬೇತಿ ಸೂತ್ರಗಳಿಗೆ ಬಹುಮಾನ ನೀಡಬೇಕು. ತರಬೇತಿಯಲ್ಲಿ ಕಲಿತ ವಿಷಯವನ್ನು ಅಳವಡಿಸಲು ಬೆಂಬಲ, ಅನಂತರದ ಉಸ್ತುವಾರಿ, ಮತ್ತು ಯಾವುದನ್ನು ಅಳವಡಿಸಲಾಗುವುದಿಲ್ಲ ಎಂಬುದನ್ನು ಪರಿಶೀಲಿಸಬೇಕು.

**ತರಬೇತಿಯ ಮೌಲ್ಯಾಂಕನ**

ತರಬೇತಿ ಸೂತ್ರದ ಕೊನೆಯ ಭಾಗ ಎಂದರೆ ಸರಿಯಾದ ಮೌಲ್ಯಾಂಕನ.ತರಬೇತಿಯ ಮೌಲ್ಯಾಂಕನ ವಿಧಾನ ಪ್ರಾಚೀನವಾದ್ದು. ಇದು ಪರಿಣಾಮಕಾರಿಯಾಗಿಲ್ಲ. ತರಬೇತಿಯ ಕೊನೆಯಲ್ಲಿ ಕೆಲವು ಫಾರಂಗಳನ್ನು ಭರ್ತಿಮಾಡಿಸುವುದರಿಂದ ಮೌಲ್ಯಾಂಕನದ ಹೆಸರಿನಲ್ಲಿ ವಾಡಿಕೆಯ ಪ್ರಕ್ರಿಯೆಗಳನ್ನು ಅನುಸರಿಸಲಾಗುತ್ತಿದೆ. ಇದರಿಂದ ಒಂದು ಪ್ರಶ್ನೆ ಏಳುತ್ತದೆ. ಏನೆಂದರೆ: ಈ ಮೌಲ್ಯಾಂಕನವನ್ನು ಯಾರಿಗೋಸ್ಕರ ಮಾಡಬೇಕು? ಎಂಬುದು ಪ್ರಶ್ನೆ. ಸಿಬ್ಬಂದಿಗಳಿಗೋಸ್ಕರವೆ? ತರಬೇತಿ ಸಂಸ್ಥೆಗಳಿಗೋಸ್ಕರವೇ ? ಅಧ್ಯಾಪಕರಿಗಳಿಗೋಸ್ಕರವೇ ? ಅಥವಾ ಸಂಸ್ಥೆಗೊ ? ಏನನ್ನು ಮೌಲ್ಯಾಂಕನ ಮಾಡಬೇಕು ? ಇಲ್ಲಿಯ ತನಕ ಪ್ರತಿಕ್ರಿಯೆಯ ಮೂಲಕ ಮೌಲ್ಯಾಂಕನ ಮಾಡಲಾಗುತ್ತಿತ್ತು. ಅಷ್ಟೆ. ಇನ್ನು ಮುಂದೆ ಮೌಲ್ಯಾಂಕನ ತಂತ್ರಗಳಿಗೆ ಹೆಚ್ಚಿನ ಗಮನ ಕೊಡಬೇಕು. ಅಂದರೆ ಮೌಲ್ಯಾಂಕನ ಈ ರೀತಿ ಮಾಡಬಹುದಾಗಿದೆ : ತರಬೇತಿಯ ಅನಂತರ ಅವರ ಕೆಲಸದಲ್ಲಿ ಆಗಿರುವ ಬದಲಾವಣೆಯನ್ನು ಗಮನಿಸುವುದು, ಅವರ ನಡವಳಿಕೆ ಇತ್ಯಾದಿಯನ್ನೂ ಗಮನಿಸಬಹುದು. ಉತ್ಪನ್ನಗಳ ದಾಖಲೆ, ಗೈರುಹಾಜರಿ, ದೂರು, ಮುಷ್ಕರಗಳು ಮುಂತಾದುವನ್ನು ಪರಿಗಣಿಸಬಹುದು. ಈ ದಿಸೆಯಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನ ಸಾಧನೆ ಗಮನಾರ್ಹ. ತರಬೇತಿಯ ಗ್ರಾಹ್ಯ ಮೌಲ್ಯಾಂಕನ ಮಾಡುವುದರಲ್ಲಿ ಅದು ಒಳ್ಳೆಯ ಕೆಲಸ ಮಾಡಿದಮೇಲೆ ಮಾಡಲಾದ ವಿವೇಚನೆಯ ದೃಷ್ಟಿಯಿಂದ ಕೂಡಿದ ತರಬೇತಿ ಸೂತ್ರವನ್ನು ಅಳವಡಿಸಿದ್ದೇ ಆದಲ್ಲಿ ಸಂಸ್ಥೆ ತನ್ನ ನಿರ್ದಿಷ್ಟ ಗುರಿಯತ್ತ ಶೀಘ್ರವಾಗಿ ಮುನ್ನಡೆಯುವುದರಲ್ಲಿ ಸಂದೇಹವಿಲ್ಲ.

(ಋಣ : ಶ್ರೀ ಉದಯ ಪರೀಖ್ ಅವರ Training Strategy of Banks)

# ವಿದೇಶಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆ: ಇಂಗ್ಲೆಂಡ್‌ನಲ್ಲಿ

ಸಾ. ಅ. ಮಂಜುನಾಥ

ಒಂದು ಅರ್ಥದಲ್ಲಿ ಇಂಗ್ಲೆಂಡನ್ನು ಬ್ಯಾಂಕಿಂಗ್ ವ್ಯವಸ್ಥೆಯ ತವರೂರೆಂದರೂ ತಪ್ಪಾಗದು. ಇಂದು ನಾವು ಅನುಸರಿಸುತ್ತಿರುವ ಬ್ಯಾಂಕಿಂಗಿನ ಪರಿಕಲ್ಪನೆಯ ಉಗಮಸ್ಥಾನವನ್ನು ಹುಡುಕುತ್ತ ಹೋದರೆ ಆ ಹಾದಿ ನಮ್ಮನ್ನು ಮಧ್ಯಯುಗೀನ ಇಂಗ್ಲೆಂಡಿಗೆ ಒಯ್ಯುತ್ತದೆ. ಆಗ ಆಧುನಿಕ ರೀತಿಯ ಬ್ಯಾಂಕಿಂಗ್ ವ್ಯವಸ್ಥೆ ಇರಲಿಲ್ಲ. ಅಕ್ಕಸಾಲಿಗರ ಬಳಿಯಲ್ಲಿ ಭದ್ರಕೋಣೆಗಳೂ, ತಿಜೋರಿಗಳೂ ಇರುತ್ತಿದ್ದುದರಿಂದ ಅವರ ಗ್ರಾಹಕರು ತಮ್ಮಲ್ಲಿದ್ದ ಚಿನ್ನಬೆಳ್ಳಿ ನಾಣ್ಯಗಳನ್ನು ಅವರಲ್ಲಿ ಇಡುತ್ತಿದ್ದರು. ಅಕ್ಕಸಾಲಿಗರು ಅವನ್ನು ಗ್ರಾಹಕರು ಕೇಳಿದಾಗ ಹಿಂದಿರುಗಿಸುವ ವಾಗ್ದಾನ ಮಾಡಿ, ತಮ್ಮಲ್ಲಿಟ್ಟ ಠೇವಣಿಗೆ ಪ್ರತಿಯಾಗಿ ರಸೀತಿಗಳನ್ನು ನೀಡುತ್ತಿದ್ದರು. ಈ ರಸೀತಿಗಳು ಗ್ರಾಹಕರ ನಂಬಿಕೆ ಗಳಿಸಿ, ಹಣದಂತೆಯೇ ಚಲಾವಣೆಗೊಳ್ಳತೊಡಗಿದುವು. ಈ ರಸೀತಿಗಳೇ ಇಂದಿನ ಚೆಕ್ಕುಗಳು ಮತ್ತು ಬ್ಯಾಂಕ್ ನೋಟುಗಳ ಉಗಮಸ್ಥಾನ.

1670ರಲ್ಲಿ ತೀವ್ರವಾದ ಆರ್ಥಿಕ ಬಿಕ್ಕಟ್ಟು ಇಂಗ್ಲೆಂಡಿನಲ್ಲಿ ಒದಗಿದಾಗ ಈ ಅಕ್ಕಸಾಲಿಗ ಬ್ಯಾಂಕುಗಳ ವ್ಯವಹಾರ ಕೆಟ್ಟು ಜನರು ವ್ಯವಸ್ಥಿತವಾದ ಬ್ಯಾಂಕಿನ ಆವಶ್ಯಕತೆಯನ್ನು ಮನಗಾಣತೊಡಗಿದರು. 1688ರ ಕ್ರಾಂತಿಯ ಅನಂತರ 1694ರಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡ್ ಅಸ್ತಿತ್ವಕ್ಕೆ ಬಂತು. ಈ ಬ್ಯಾಂಕೇ ಇಂದು ಇಂಗ್ಲೆಂಡಿನ ಕೇಂದ್ರ ಬ್ಯಾಂಕಾಗಿದೆ. ಬ್ಯಾಂಕ್ ಆಫ್ ಇಂಗ್ಲೆಂಡ್ ಜಗತ್ತಿನ ಅತ್ಯಂತ ಹಿರಿಯ ಕೇಂದ್ರ ಬ್ಯಾಂಕ್ ಕೂಡ.

## ಬ್ಯಾಂಕ್ ಆಫ್ ಇಂಗ್ಲೆಂಡ್

1694ರಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡ್ ಹುಟ್ಟಿದಾಗ ಅದು ಇಂಗ್ಲೆಂಡಿನ ಕೇಂದ್ರ ಬ್ಯಾಂಕ್ ಆಗಿರಲಿಲ್ಲ. ತನ್ನ ಸುದೀರ್ಘ ಬಾಳಿನಲ್ಲಿ ತಾನು ಸಲ್ಲಿಸಿದ ಸೇವೆಯಿಂದ ಕ್ರಮಪ್ರಾಪ್ತವಾಗಿ ಕೇಂದ್ರ ಬ್ಯಾಂಕಿನ ಸ್ಥಾನದ ಹಿರಿಮೆಯನ್ನು ಅದು ಗಳಿಸಿಕೊಂಡಿತು.

ಇಂಗ್ಲೆಂಡಿನ ಮೂರನೆಯ ವಿಲಿಯಮ್ ದೊರೆಗೆ ಕೊಟ್ಟ ಹನ್ನೆರಡು ಲಕ್ಷ ಪೌಂಡ್ ಸಾಲಕ್ಕೆ ಪ್ರತಿಯಾಗಿ ಸನ್ನದು ಪಡೆದುಕೊಂಡು ಕೆಲ ಮಂದಿ ವರ್ತಕರು ಈ ಬ್ಯಾಂಕನ್ನು ಸ್ಥಾಪಿಸಿದರು. ಸಂಯುಕ್ತ ಬಂಡವಾಳ ಸಂಸ್ಥೆಯಾಗಿ ಈ ಬ್ಯಾಂಕು ಸ್ಥಾಪಿತವಾಯಿತು. ಕಾಲಕ್ರಮದಲ್ಲಿ ಇದು ಸರಕಾರದ ಪರವಾಗಿ ಹಣವನ್ನು ಸ್ವೀಕರಿಸುವ ಮತ್ತು ಪಾವತಿಮಾಡುವ ಕೆಲಸವನ್ನು ನಿರ್ವಹಿಸತೊಡಗಿತು. ಈ ಬ್ಯಾಂಕು ಅನೇಕ ಬಾರಿ ಸರಕಾರಕ್ಕೆ ನೇರವಾಗಿ ಸಾಲ ನೀಡುತ್ತಿದ್ದುದೂ ಉಂಟು. ಇದರಿಂದಾಗಿ ಇದು ಇತರ ಬ್ಯಾಂಕುಗಳಿಗಿಂತ ವಿಶೇಷ ಸ್ಥಾನಮಾನವುಳ್ಳುದಾಗಿ ಬೆಳೆಯುತ್ತಾ, ತನ್ನ ಅಧಿಕಾರವನ್ನು ಹೆಚ್ಚಿಸಿಕೊಳ್ಳತೊಡಗಿತು. ಇತರ ಬ್ಯಾಂಕುಗಳ ಮೇಲೆ ಪ್ರಭಾವ ಬೀರುವ ಹಾಗೂ ಅವುಗಳನ್ನು ನಿಯಂತ್ರಿಸುವ ಮಟ್ಟಿಗೆ ಶಕ್ತಿ ಬೆಳೆದಾಗ ಇದು ಕೇಂದ್ರ ಬ್ಯಾಂಕ್ ಆಗಿ ರೂಪುಗೊಂಡಿತು. ಹೀಗೆ ಆದುದು 1844ರಲ್ಲಿ—ಈ ಬ್ಯಾಂಕಿಗೆ ನೀಡಿದ್ದ ಸನ್ನದನ್ನು ನವೀಕರಿಸುವ ವೇಳೆ ಬಂದಾಗ.

ತನ್ನ ಜೀವಮಾನದ ಮೊದಲ ಶತಕವನ್ನು ಕಳೆಯುವ ವೇಳೆಗೆ ಎಲ್ಲರ ಗಮನ ಸೆಳೆಯುವಷ್ಟು ಪ್ರಸಿದ್ಧಿ ಹಾಗೂ ಅಂತಃಸ್ಸತ್ವವನ್ನು ಈ ಬ್ಯಾಂಕ್ ಗಳಿಸಿತ್ತು. ಪಾಶ್ಚಾತ್ಯ ಅರ್ಥಶಾಸ್ತ್ರದ ಪಿತಾಮಹನೆನಿಸಿದ ಆಡಮ್ ಸ್ಮಿತ್ ಈ ಬ್ಯಾಂಕನ್ನು 'ಇದು ಸಾಮಾನ್ಯ ಬ್ಯಾಂಕಲ್ಲ, ಪ್ರಭುತ್ವದ ದೊಡ್ಡ ಚಾಲಕ ಶಕ್ತಿ' ಎಂದು ಹೊಗಳಿದ.

1837ರಲ್ಲಿ ಅನೇಕ ಬ್ಯಾಂಕುಗಳು ಮುಳುಗಿ ಹೋಗುತ್ತಿದ್ದಾಗ ಬ್ಯಾಂಕ್ ಆಫ್ ಇಂಗ್ಲೆಂಡ್ ಅನೇಕ ಸಣ್ಣಪುಟ್ಟ ಬ್ಯಾಂಕುಗಳಿಗೆ ಆಪದ್ಬಂಧುವಾಗಿ ಕಾರ್ಯ ನಿರ್ವಹಿಸಿ ಅವುಗಳನ್ನು ರಕ್ಷಿಸಿತು. 1844ರಲ್ಲಿ ಜಾರಿಗೆ ಬಂದ ನೋಟು ಪ್ರಚಾಲನೆ ಅಧಿನಿಯಮದ ಪರಿಣಾಮವಾಗಿ ಬ್ಯಾಂಕ್ ನೋಟುಗಳನ್ನು ಹೊರಡಿಸುತ್ತಿದ್ದ ಬ್ಯಾಂಕುಗಳ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತ ಬಂದು, ಕೊನೆಗೆ ಬ್ಯಾಂಕ್ ಆಫ್ ಇಂಗ್ಲೆಂಡ್ ಇಂಗ್ಲೆಂಡಿನಲ್ಲಿ ಬ್ಯಾಂಕ್ ನೋಟುಗಳ ನೀಡಿಕೆ ಮಾಡಬಲ್ಲ ಏಕೈಕ ಬ್ಯಾಂಕ್ ಆಯಿತು.

## ಸರ್ಕಾರಿ ಒಡೆತನ

ಎರಡನೆಯ ಮಹಾಯುದ್ಧದ ಅನಂತರ ಬ್ರಿಟನ್ನಿನಲ್ಲಿ

ಅಧಿಕಾರಕ್ಕೆ ಬಂದ ಲೇಬರ್ ಸರಕಾರ 1946ರ ಮಾರ್ಚ್ 1ರಂದು ಬ್ಯಾಂಕ್ ಆಫ್ ಇಂಗ್ಲೆಂಡನ್ನು ರಾಷ್ಟ್ರೀಕರಿಸಿತು. ಈ ರೀತಿ ಬ್ಯಾಂಕಿನ ಸಂಪೂರ್ಣ ಸ್ವಾಮ್ಯ ಸರಕಾರದ್ದಾದರೂ ಅಂದು ಇದ್ದ ಬ್ಯಾಂಕಿನ ಸಂರಚನೆಯಲ್ಲಿ ಹೆಚ್ಚಿನ ಬದಲಾವಣೆಗಳನ್ನೇನೂ ಮಾಡಲಿಲ್ಲ.

ಇಂದಿನ ಬ್ಯಾಂಕ್ ಆಫ್ ಇಂಗ್ಲೆಂಡ್ ದೇಶದ ಕೇಂದ್ರ ಬ್ಯಾಂಕ್ ಆಗಿ ಸರಕಾರದ ಹಣಕಾಸಿನ ನೀತಿಗಳನ್ನು ಜಾರಿಗೆ ತರುವಲ್ಲಿ ಪ್ರಧಾನಪಾತ್ರ ನಿರ್ವಹಿಸುತ್ತಿದೆ. ಬ್ಯಾಂಕಿನ ನೀತಿಗೆ ಸಂಬಂಧಿಸಿದ ವಿಚಾರಗಳಲ್ಲಿ ಸರಕಾರದ ನಿಯಂತ್ರಣ ಇರುವುದಾದರೂ ಬ್ಯಾಂಕಿನ ದಿನವಹಿ ಆಡಳಿತದಲ್ಲಿ ಸರಕಾರ ತಲೆಹಾಕುವುದಿಲ್ಲ. ಸರಕಾರ ನೀಡುವ ಮಾರ್ಗದರ್ಶಿ ಸೂತ್ರಗಳಿಗೊಳಪಟ್ಟು ತನ್ನ ಕಾರ್ಯವನ್ನು ಅದು ಸ್ವತಂತ್ರವಾಗಿ ನಿರ್ವಹಿಸುತ್ತಿದೆ. ಬ್ಯಾಂಕು ಮತ್ತು ಸರಕಾರದ ನಡುವೆ ಅಧಿಕಾರಿಗಳ ವಿನಿಮಯಕ್ಕೆ ಅವಕಾಶವಿದೆ. ಬ್ಯಾಂಕಿನ ವಾರ್ಷಿಕ ವರದಿಯನ್ನು ದೇಶದ ಸಂಸತ್ತಿನ ಮುಂದೆ ಇಡಲಾಗುತ್ತದೆ. ಬ್ಯಾಂಕಿನ ಆಡಳಿತಕ್ಕೆ ಸಂಬಂಧಿಸಿದ ವಿಚಾರಗಳನ್ನು ರಾಷ್ಟ್ರೀಯ ಉದ್ಯಮಗಳ ಬಗೆಗಿನ ಸಂಸತ್ತಿನ ಆಯ್ಕೆ ಸಮಿತಿಯೊಂದು ಬ್ಯಾಂಕಿನ ಗವರ್ನರ್ ಮತ್ತು ಇತರ ಸದಸ್ಯರನ್ನು ವಿಚಾರಿಸಿ ಪರಿಶೀಲಿಸುತ್ತದೆ. ಬ್ಯಾಂಕಿನ ಹಣಕಾಸು ನೀತಿಗಳನ್ನು ವಿಶೇಷವಾಗಿ ರಚಿಸಲಾದ ವಿಚಾರಣಾ ಸಮಿತಿ ಕೆಲವರ್ಷಗಳಿಗೊಮ್ಮೆ ಪರಿಶೀಲಿಸುತ್ತದೆ.

### ಬ್ಯಾಂಕಿನ ಸಂರಚನೆ

ಬ್ಯಾಂಕಿನ ಗವರ್ನರ್ ಹಾಗೂ ಉಪಗವರ್ನರರನ್ನು ಐದು ವರ್ಷಗಳ ಅವಧಿಗೆ ದೇಶದ ಸರಕಾರದ ಪರವಾಗಿ ದೊರೆ/ರಾಣಿ ನೇಮಿಸುತ್ತಾರೆ. ಈ ಅವಧಿಯನಂತರ ಅವರು ಅದೇ ಹುದ್ದೆಗೆ ಮರುನೇಮಕಗೊಳ್ಳಬಹುದು. ಹದಿನಾರು ಜನ ನಿರ್ದೇಶಕರ ಮಂಡಳಿಯನ್ನು ಸಹ ಸರಕಾರದ ಪರವಾಗಿ ದೊರೆ/ರಾಣಿ ನೇಮಿಸುತ್ತಾರೆ. ಇವರಲ್ಲಿ ನಾಲ್ಕು ಜನರು ಪ್ರತಿವರ್ಷದ ಫೆಬ್ರವರಿ ತಿಂಗಳನಲ್ಲಿ ಸರದಿಯ ಪ್ರಕಾರ ನಿವೃತ್ತರಾಗುತ್ತಾರೆ. ಯಾವುದೇ ವೇಳೆಯಲ್ಲಿ ಎಲ್ಲ ನಿರ್ದೇಶಕರನ್ನೂ ಒಟ್ಟಿಗೆ ವಜಾ ಮಾಡಿ ಅವರ ಜಾಗದಲ್ಲಿ ಹೊಸಬರನ್ನು ನೇಮಿಸಲು ಸರಕಾರಕ್ಕೆ ಅಧಿಕಾರವಿಲ್ಲ. ನಿರ್ದೇಶಕರ ಮಂಡಳಿಯಲ್ಲಿನ ನಿರ್ದೇಶಕರ ಪೈಕಿ ನಾಲ್ಕು ಜನರಿಗೆ ಹೆಚ್ಚಿಲ್ಲದಂತೆ ಪೂರ್ಣಪ್ರಮಾಣದ ನಿರ್ದೇಶಕರನ್ನಾಗಿ ನೇಮಿಸಲಾಗುತ್ತದೆ. ಉಳಿದ ಹನ್ನೆರಡು ಮಂದಿ ನಿರ್ದೇಶಕರನ್ನು ಕೈಗಾರಿಕೆ, ವಾಣಿಜ್ಯ, ಕಾರ್ಮಿಕ ಸಂಘಗಳು, ಬ್ಯಾಂಕಿಂಗ್ ಮುಂತಾದ ವಿವಿಧ ಕ್ಷೇತ್ರಗಳಿಂದ ಪ್ರಾತಿನಿಧಿಕವಾಗಿ ನೇಮಿಸಲಾಗುತ್ತದೆ.

### ಬ್ಯಾಂಕಿನ ಆಡಳಿತ

ಬ್ಯಾಂಕಿನ ದೈನಂದಿನ ಆಡಳಿತ ನಿರ್ವಹಣೆಯಲ್ಲೂ ಸರಕಾರಕ್ಕೆ ತಿಳುವಳಿಕೆ ಹಾಗೂ ಸಲಹೆಗಳನ್ನು ನೀಡುವುದರಲ್ಲೂ ಗವರ್ನರನವೇ ಅತಿಮುಖ್ಯವಾದ ಹೊಣೆಗಾರಿಕೆಯಾಗಿರುತ್ತದೆ. ಗವರ್ನರ್ ತನ್ನ ಕಾರ್ಯದಲ್ಲಿ ನಿರ್ದೇಶಕರ ಮಂಡಳಿಯ ಯಾವುದೇ ನಿರ್ದೇಶಕನ ಅಥವಾ ನಿರ್ದೇಶಕರನ್ನೊಳಗೊಂಡ ಸ್ಥಾಯೀ ಸಮಿತಿಗಳ ಸಲಹೆ ಸೂಚನೆಗಳ ನೆರವನ್ನು ಪಡೆದುಕೊಳ್ಳಬಹುದು. ಇಂತಹ ಸ್ಥಾಯೀ ಸಮಿತಿಗಳಲ್ಲಿ ಹಣಕಾಸು ಸ್ಥಾಯೀ ಸಮಿತಿಯು ನೀತಿ ನಿರ್ಧಾರಣೆಯ ವಿಷಯಗಳಲ್ಲಿ ಬಹಳ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತದೆ.

ಇಂಗ್ಲೆಂಡಿನ ಈ ಕೇಂದ್ರ ಬ್ಯಾಂಕು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಅತ್ಯಂತ ಶ್ರೇಷ್ಠ ಸಂಪ್ರದಾಯಗಳನ್ನು ಸ್ಥಾಪಿಸಿದೆ. ಸರಕಾರದ ಗೆಳೆಯ, ದಾರ್ಶನಿಕ ಹಾಗೂ ಮಾರ್ಗದರ್ಶಿಯಾಗಿ ತನ್ನ ಕೆಲಸವನ್ನು ಸಮರ್ಥವಾಗಿ ನಿರ್ವಹಿಸುತ್ತಿದೆ. ಇತರ ದೇಶಗಳ ಬ್ಯಾಂಕಿಂಗ್ ಸಂಸ್ಥೆಗಳು ಈ ಸಂಸ್ಥೆಯ ಸಂರಚನೆಯನ್ನು ಬಹುಮಟ್ಟಿಗೆ ಆಧರಿಸಿ ತಂತಮ್ಮ ವ್ಯವಸ್ಥೆಗಳನ್ನು ಸುಭದ್ರವಾದ ತಳಹದಿಯ ಮೇಲೆ ರಚಿಸಿಕೊಂಡಿರುವುದನ್ನು ಗಮನಿಸಿದರೆ, ಈ ಅತಿ ಹಿರಿಯ ಕೇಂದ್ರ ಬ್ಯಾಂಕಿನ ಮಹತ್ವ ಅರಿವಾಗದಿರದು.

No. R.N. 36702/83



MYSORE PRINTING AND PUBLISHING HOUSE, MYSORE